ಸಾಕ್ಷರೋತ್ತರ ಕಾರ್ಯಕ್ರಮದ ಟಿಪ್ಪಣಿ ಭಾಗ - 2

# ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು




ಭಾರತ ಜ್ಞಾನ ವಿಜ್ಞಾನ ಸಮಿತಿ

ಭಾರತೀಯ ವಿಜ್ಞಾನ ಮಂದಿರ

ಬೆಂಗಳೂರು - 560 012

# ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಸಾಕ್ಷರೋತ್ತರ
ಕಾರ್ಯಕ್ರಮದ
ಮಸುಕಾದ
ವಲಯಗಳು

ಅನುವಾದಕರು

**ರಾಮಕೃಷ್ಣಪ್ಪ**
**ಎಸ್. ಇಂದಿರಮ್ಮ**
**ಕೆ.ಎನ್.ಮಧುಸೂದನ್ ರಾವ್**

Saksharottara Karyakramada Masukada Valayagalu, translated by Ramakrishnappa and N. Indiramma, published by the Secretary, Bharat Gyan Vigyan Samithi, Badam marg, Indian Institute of Science Campus, Bangalore – 560 012.

Crown : 1/4 Pages : 59 + 4 Price Rs.5 /–



ಬೆಲೆ : 5.00 ರೂ.

ಒಳಪುಟ ವಿನ್ಯಾಸ : ಎಂ. ಹೆಚ್. ಶ್ರೀಧರಮೂರ್ತಿ

ಡಿ.ಟಿ.ಪಿ : K.N. Venkatesh

ಪ್ರಕಾಶಕರು : ಭಾರತ ಜ್ಞಾನ ವಿಜ್ಞಾನ ಸಮಿತಿ
ಭಾರತೀಯ ವಿಜ್ಞಾನ ಸಂಸ್ಥೆಯ ಆವರಣ, ಬೆಂಗಳೂರು – 12

ಮುದ್ರಕರು : ರವಿ ಗ್ರಾಫಿಕ್ಸ್



## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

*1*

### ಚರ್ಚೆ 1 ಕೇವಲ ಅರ್ಥೈಸುವಿಕೆ ಅಥವಾ ಅರ್ಥ ಕಂಡುಕೊಳ್ಳುವಿಕೆ

ನಿರೂಪಕ : ಸಾಕ್ಷರೋತ್ತರ ಕಾರ್ಯಕ್ರಮವೆಂದರೇನು ? ಅದೇ ಪ್ರಶ್ನೆ

ಮುಸ್ತಾಕ್ : ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದು ಕಷ್ಟವೆಂದು ನನಗನ್ನಿಸುವುದಿಲ್ಲ. 40-50 ಗಂಟೆಗಳ ಸೇತುವೆಯಂತಿರುವ ಪ್ರಾಥಮಿಕ (Bridge Primer)ದ ಬೋಧನೆ ಎಂದು ಸತ್ಯೇನ್ ಮೊಯಿತ್ರ ಸಮಿತಿಯು ಸಾಕ್ಷರೋತ್ತರ ಕಾರ್ಯಕ್ರಮದ ಬಗ್ಗೆ ಸ್ಪಷ್ಟವಾಗಿ ಹೇಳಿದೆ. ಇದೇ ಸಾಕ್ಷರೋತ್ತರ ಕಾರ್ಯ ಕ್ರಮ ಉಳಿದದ್ದು ನಿರಂತರ ಶಿಕ್ಷಣ ಮತ್ತು ಪಠ್ಯೇತರ ಕಲಿಕಾ ಅವಕಾಶಗಳನ್ನು ಒದಗಿಸುವುದು.

ನಿರೂಪಕ : ಆದರೆ, ಇಂದು ರಾಷ್ಟ್ರೀಯ ಸಾಕ್ಷರತಾ ಆಯೋಗದಿಂದ ಮಂಜೂರಾತಿ ಪಡೆದ ಎಲ್ಲಾ ಸಾಕ್ಷರೋತ್ತರ ಯೋಜನೆಗಳು ಒಂದು ಅಥವಾ ಎರಡು ವರ್ಷ ಅವಧಿಯವುಗಳಾಗಿವೆ ?

ಪ್ರೇಮ್ : ಸತ್ಯೇನ್ ಮೊಯಿತ್ರ ಸಮಿತಿಯು ಈ ಕಾರ್ಯಕ್ರಮವನ್ನು ಶಿಫಾರಸ್ಸು ಮಾಡಿರುವುದು ಇಡೀ ಎರಡು ವರ್ಷ ಅವಧಿಗೆ ಎಂದು ನನಗನ್ನಿಸುತ್ತದೆ. "ಮತ್ತೊಂದು ಪ್ರಾಥಮಿಕ ಅಥವಾ 40-50 ಗಂಟೆಗಳ ಸಾಕ್ಷರೋತ್ತರ ಪ್ರಾಥಮಿಕವಿರಬೇಕು" ಎಂಬುದು ಈ ವರದಿಯ ಸರ್ವಸಮ್ಮತ ಶಿಫಾರಸ್ಸಿನ ಒಂದು ಭಾಗ. ಈ ಸಾಕ್ಷರೋತ್ತರ ಪ್ರಾಥಮಿಕವು ಕ್ರಮಬದ್ಧವಾದ, ಪಠ್ಯ ಆಧಾರಿತ, ಸ್ವಯಂಬೋಧಕ ಮಾರ್ಗದರ್ಶಕ ಕಲಿಕೆಗೆ ಅವಕಾಶ ನೀಡುತ್ತದೆ. ಆದರೆ ಸತ್ಯೇನ್ ಮೊಯಿತ್ರ ವರದಿಯು ಇತರ ಕಲಿಕಾಮಾರ್ಗೋ ಪಾಯಗಳಿಗೂ ಸಹ ಒತ್ತು ನೀಡುತ್ತದೆ - ಪೂರಕ ಓದುವ ಸಾಮಗ್ರಿ ಒದಗಿಸುವುದು, ಪಠ್ಯೇತರ ಕಲಿಕೆಯನ್ನು ಮಾಡುವಂತಹ ವಾತಾವರಣ ನಿರ್ಮಾಣ, ಎಲೆಕ್ಟ್ರಾನಿಕ್ ಮಾಧ್ಯಮಗಳ ಬಳಕೆ ಮತ್ತು ಪಠ್ಯ ಆಧಾರಿತವಲ್ಲದ ಸಾಮೂಹಿಕ ಕಲಿಕೆ, ಇವುಗಳೆಲ್ಲಾ ಸಾಕ್ಷರೋತ್ತರ ವ್ಯಾಖ್ಯಾನಗಳ ವ್ಯಾಪ್ತಿಗೆ ಬರುತ್ತವೆ.

ಮುಸ್ತಾಕ್ : ಇಡೀ ಸಾಕ್ಷರೋತ್ತರ ಕಾರ್ಯಕ್ರಮದ ತಿರುಳನ್ನು ಅರ್ಥಮಾಡಿಕೊಳ್ಳು ವುದೇನೆಂದರೆ ಇಂದು ಸಂಪೂರ್ಣಸಾಕ್ಷರತಾ ಆಂದೋಲನದ ಉದ್ದೇಶ ಜನರಲ್ಲಿ 200 ಗಂಟೆಗಳಲ್ಲಿ ಸಮರ್ಪಕವಾದ ಕಲಿಕಾ ಕೌಶಲಗಳನ್ನು ಬೆಳೆಸುವುದು. ತಾತ್ವಿಕವಾಗಿ ಇದರ ಅರ್ಥ 6 ತಿಂಗಳಲ್ಲಿ 3 ಪ್ರಾಥಮಿಕಗಳನ್ನು ಕಲಿಸುವುದು (ಆದರೆ ವಸ್ತುನಿಷ್ಠವಾಗಿ ಹೇಳುವುದಾದರೆ ಕೇವಲ ಎರಡೇ

ಪ್ರಾಥಮಿಕಗಳನ್ನು ಮುಗಿಸಲು ಸಾಧ್ಯವಾಗುತ್ತದೆ. ಪೂರ್ತಿ ಕಾರ್ಯಕ್ರಮ ಮುಗಿಯಲು 8 ತಿಂಗಳು ಬೇಕಾಗುತ್ತವೆ) ಸಾಧಿಸಲಾಗಿರುವ ಸಾಕ್ಷರ ಕೌಶಲಗಳ ಮಟ್ಟ ಈ ಹಂತದಲ್ಲಿ ಕೂಡ ಏನೇನು ಸಾಲದು. ಆದ್ದರಿಂದ ಮೂರನೇ ಪ್ರಾಥಮಿಕದ ನಂತರ 40 ರಿಂದ 50 ಗಂಟೆಗಳ ಅವಧಿಯ ಸೂಚನೆಗಳನ್ನು ಬೋಧಿಸುವ ಒಂದು ಕೋರ್ಸ್ ಇದ್ದರೆ ಚೆನ್ನಾಗಿರುತ್ತದೆ ಎಂದು ನಾವು ಸಲಹೆ ಮಾಡುತ್ತೇವೆ. ಇದಾದ ನಂತರ ನಾವು ವರ್ತಮಾನ ಪತ್ರಿಕೆ ಮತ್ತು ಪುಸ್ತಕಗಳನ್ನು ಒದಗಿಸುತ್ತೇವೆ. ಆದರೆ ಕಾರ್ಯಕ್ರಮ ನಿರ್ದೇಶಕರು ಮತ್ತು ರಾಷ್ಟ್ರೀಯ ಸಾಕ್ಷರತಾ ಆಯೋಗ ಮುಂದಿನ ಜವಾಬ್ದಾರಿ ಹೊರುವುದಿಲ್ಲ. ಇದರರ್ಥವೇನೆಂದರೆ ಸ್ವಯಂಬೋಧಕರ ತರಬೇತಿಯನ್ನು ಸಹ ಈ 40 ಗಂಟೆಗಳಿಗೆ ಮಿತಿಗೊಳಿಸಬೇಕೆಂಬುದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

2

ನಿರೂಪಕ : ಹಾಗಾದರೆ ಇದನ್ನು 240 ಗಂಟೆಗಳ ಸಾಕ್ಷರತಾ ಪಠ್ಯವಿಷಯ ಎಂದೇಕೆ ಕರೆಯಬಾರದು ? ಇದನ್ನು 200 ಗಂಟೆಗಳ ಸಾಕ್ಷರತೆ ಮತ್ತು 40 ಗಂಟೆಗಳ ಸಾಕ್ಷರೋತ್ತರ ಕಾರ್ಯಕ್ರಮವೆಂದೇಕೆ ಕರೆಯಬೇಕು ?

ಮುಸ್ತಾಕ್: ಅಂತಹ ನಿರ್ದಿಷ್ಟ ಕಾರಣವೇನೂ ಇಲ್ಲ. ಪ್ರಾರಂಭಿಕ ಶಿಫಾರಸ್ಸಿನ ಪ್ರಕಾರ ಅದು 300 ಗಂಟೆ ಅಥವಾ 400 ಗಂಟೆಯೂ ಆಗಬಹುದು ಎಂಬುದು ನಿನಗೆ ತಿಳಿದಿರಲಿ. ಸುಧಾರಿತ ವೇಗ ಮತ್ತು ವಿಷಯ ಕಲಿಕೆ (IPCL)ಸೂತ್ರದಂತೆ ಅದನ್ನು ನಾವು 200ಗಂಟೆಗಳಿಗೆ ಇಳಿಸಿದ್ದೇವೆ. ಆದರೆ ಹಿಂದಿನ 300 ಗಂಟೆಗಳು ಮತ್ತು ಇಂದಿನ 200 ಗಂಟೆಗಳ ಶಿಫಾರಸ್ಸು ಕೇವಲ ಅಂದಾಜು. ಇದಕ್ಕೆ ಯಾವುದೇ ಸಂಶೋಧನೆಯ ಸಮರ್ಥನೆಯಿಲ್ಲ. ವಯಸ್ಕರ ಶಿಕ್ಷಣದಲ್ಲಿ ನಾವು ಕೇವಲ ಈ ಅಂದಾಜಿನಂತೆಯೇ ಕೆಲಸ ಮಾಡಿದೆವು. ಕೆಲವು ಸಾರಿ ನಾವು ಈ ಶಿಫಾರಸ್ಸುಗಳನ್ನು ಬದಲಿಸಬಹುದು.

ದವೆ : ಸಾಕ್ಷರೋತ್ತರ ಪಠ್ಯಗಳ PL1, PL2 ಸಾಧ್ಯವಾದರೆ PL-III, PL-IV ಮತ್ತು PL-V ಗಳ ದೀರ್ಘಸರಣಿಯು, ಒಂದು ಸಮರ್ಪಕ ಹಂತಕ್ಕೆ ಕಲಿಕಾ ಕೌಶಲಗಳನ್ನು ವೃದ್ಧಿಸಲು ಅವಶ್ಯಕವೆಂಬುದು ನನ್ನ ನಂಬಿಕೆ. ಆದರೆ ಕಾರ್ಯಕ್ಷೇತ್ರದಲ್ಲಿ ಇಷ್ಟೊಂದು ಸುದೀರ್ಘ ಅವಧಿಯವರೆಗೆ ಜೀವಂತಿಕೆ ಉಳಿಸುವುದು ಸಾಧ್ಯವಾಗುವುದಿಲ್ಲ ಎಂಬುದು ನಿಜವಾದ ಅನುಭವವಾಗಿರುವುದರಿಂದ ನಾವು ಒಂದೇ ಪಠ್ಯಕ್ಕೆ ಸೀಮಿತವಾಗಿದ್ದೇವೆ. ಹಾಗೆಂದು ಕಾರ್ಯಕ್ರಮದ ವ್ಯಾಪ್ತಿಯನ್ನು ಸೀಮಿತಗೊಳಿಸಲು ನಾನು ಇಚ್ಛಿಸುವುದಿಲ್ಲ. ಕಡೆಯಪಕ್ಷ ಯಾರು ಕಲಿಕೆಯನ್ನು ಮುಂದುವರಿಸುತ್ತಾರೋ ಅವರಿಗೆ ಸೂಕ್ತ ಅವಕಾಶ ಕಲ್ಪಿಸಿದರೆ ನನಗೆ ಸಂತೋಷವಾಗುತ್ತದೆ. ಆದರೆ ಪೂರಕ ಓದುವ ಸಾಮಗ್ರಿ ಮತ್ತು ಮತ್ತಿತರ ಕಲಿಕಾ ಮಾರ್ಗೋಪಾಯಗಳು ಕೆಳದರ್ಜೆ (down graded) ಯವಾಗಿರಬಾರದು ಎಂದು ನನ್ನ ಅಭಿಪ್ರಾಯ. ಈಗಾಗಲೇ ಸಾಧಿಸಿರುವ

ಕೌಶಲಗಳನ್ನು ಉಳಿಸಿಕೊಳ್ಳಲು ಮತ್ತು ಸ್ವಕಲಿಕೆಯನ್ನು ಗಳಿಸಿಕೊಳ್ಳಲು ಇವು ಹೆಚ್ಚು ಉಪಯುಕ್ತ. 200 ಗಂಟೆಗಳಲ್ಲಿ ಅಥವಾ PL1 ಮುಗಿಯುವಷ್ಟರಲ್ಲಿ ಕಲಿಯುವವರು ಸಾಕಷ್ಟು ಸಂಖ್ಯೆಯಲ್ಲಿ ಕನಿಷ್ಠ ಕಲಿಕಾ ಮಟ್ಟವನ್ನು ತಲುಪುವುದರಿಂದ ನಿರಂತರ ಶಿಕ್ಷಣದಲ್ಲಿ ಕಲಿಕೆಯ ಮಾರ್ಗೋಪಾಯಗಳು ಪ್ರಮುಖ ಪಾತ್ರವನ್ನು ವಹಿಸುತ್ತದೆ.

ಸತ್ಯನ್: ಸಂಪೂರ್ಣಸಾಕ್ಷರತಾ ಆಂದೋಲನದಲ್ಲಿ ಸಾಧಿಸಿದ ಕಲಿಕೆಯ ಮಟ್ಟ ಸಾಕಾಗುವುದಿಲ್ಲ. ಆದ್ದರಿಂದ ನಾವು 40 ಗಂಟೆಗಳ ದಾಟುಅವಧಿಯ ಶಿಕ್ಷಣವನ್ನು (Bridge Course)ಒದಗಿಸಬೇಕು. ಅದಾದ ನಂತರ ಯಾರು ಕಲಿಕೆ ಮುಂದುವರಿಸಲು ಇಚ್ಛಿಸುತ್ತಾರೋ ಅವರು ನವಸಾಕ್ಷರರಿಗೆ ಒದಗಿಸಿರುವ ಸಾಮಗ್ರಿಯನ್ನು ಬಳಸಿಕೊಳ್ಳಬಹುದು. ಇತರರು ಕೇವಲ ತಮ್ಮ ಆಯ್ಕೆಯನ್ನು ನಿರ್ಧರಿಸಲಿ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

3

ಕೇವಲ ಒಂದು ಚಿಕ್ಕ ಗುಂಪು ಔಪಚಾರಿಕ ಶಿಕ್ಷಣದ ವಾಹಿನಿಯನ್ನು ಸೇರಲಿಚ್ಛಿಬಹುದು. ಇದು 14ವರ್ಷದ ಕೆಳಗಿನ ಮಕ್ಕಳ ಅನೌಪಚಾರಿಕ ಶಿಕ್ಷಣ ಮತ್ತು ವಯಸ್ಕರ ರಾತ್ರಿಶಾಲೆಗಳ ಬಗ್ಗೆಯೂ ನೋಡಬೇಕಾಗುತ್ತದೆ. ಇಂತಹ ರಾತ್ರಿ ಶಾಲೆಗಳು ಪಶ್ಚಿಮ ಬಂಗಾಳದಲ್ಲಿ ಅಸ್ತಿತ್ವದಲ್ಲಿದೆ. ಈ ಮೂರು ಗುಂಪುಗಳು (ಅನೌಪಚಾರಿಕ ಶಿಕ್ಷಣ, ವಯಸ್ಕ ಶಿಕ್ಷಣಾರ್ಥಿಗಳ ರಾತ್ರಿ ಶಾಲೆಗಳು ಮತ್ತು ಪಠ್ಯೇತರ ಕಲಿಕಾ ಅವಕಾಶ ಪಡೆದಿರುವವರು, ಅದರಲ್ಲೂ ವಿಶೇಷವಾಗಿ ಪುಸ್ತಕ ಪಡೆದಿರುವವರು) ಬೇರೆಬೇರೆ ರೀತಿಯ ನಿರಂತರ ಶಿಕ್ಷಣ ಸೌಲಭ್ಯಗಳ ವಾಹಿನಿಗೆ ಸೇರುವಂತೆ ನೋಡಿಕೊಳ್ಳಬೇಕು.

ಪ್ರೇಮ್: ನಿರೂಪಕನ ಪ್ರಶ್ನೆ ಎತ್ತಿಕೊಂಡೇ ನನ್ನ ವಾದವನ್ನು ಮುಂದುವರಿಸುತ್ತೇನೆ. 200 ಗಂಟೆಗಳ ಸಂಪೂರ್ಣ ಸಾಕ್ಷರತಾ ಆಂದೋಲನ ಮತ್ತು 40 ಗಂಟೆಗಳ ಸಾಕ್ಷರೋತ್ತರ ಕಾರ್ಯಕ್ರಮಎನ್ನುವುದರ ಬದಲು 240 ಗಂಟೆಗಳ ಸಂಪೂರ್ಣ ಸಾಕ್ಷರತಾ ಆಂದೋಲನ ಎಂದೇಕೆ ಕರೆಯಬಾರದು ? ಇದರ ಉದ್ದೇಶವಿಷ್ಟೆ. 200 ಗಂಟೆಗಳ ನಂತರ ಮಾರ್ಗೋಪಾಯ ದಲ್ಲಿಯೇ ಒಂದು ನಿರ್ದಿಷ್ಟವಾದ ವಿರಾಮವಿದೆ. ನಂತರದ ಕಾಲಾವಧಿಯಲ್ಲಿ (200 ಗಂಟೆಗಳ ನಂತರ) ಅನೇಕ ಮಾರ್ಗೋಪಾಯಗಳು ಅನುಷ್ಠಾನಗೊಳ್ಳುತ್ತವೆ. ಅವುಗಳಲ್ಲಿ ಪಠ್ಯಬೋಧನೆಯೂ ಒಂದು ಅದೂ ಅಲ್ಲದೆ 40 ಗಂಟೆಗಳ ಪ್ರಾಥಮಿಕದ ಸಂವಹನ ಕೇವಲ ಸ್ವಯಂಬೋಧಕ ಅವಲಂಬಿತ ಕಲಿಕೆಯಿಂದ ಕ್ರಮಬದ್ಧವಾಗಿ ಸ್ವಕಲಿಕೆ ಅಥವಾ ಸ್ವತಂತ್ರಕಲಿಕೆಯೆಡೆಗೆ ಸಾಗುವುದು. ಅಲ್ಲದೆ ಇದು ಆಂದೋಲನದ ಕಲಿಕಾ ಮಾರ್ಗೋಪಾಯಗಳು ಯೋಜಿತರೀತಿಯಲ್ಲಿ ನಿರಂತರ ಕಲಿಕೆಯೆಡೆಗೆ ಕ್ರಮಬದ್ಧವಾಗಿ ಸ್ಥಿತ್ಯಂತರಗೊಳ್ಳುವ ಕಾಲ. ಇಲ್ಲವಾದರೆ ಈ 40 ಗಂಟೆಗಳಿಗೆ ಯಾವ ಅರ್ಥವೂ ಇರುವುದಿಲ್ಲ. 40 ಗಂಟೆಗಳಲ್ಲಿ ಅವರ ಕಲಿಕೆ ಸಮರ್ಪಕವಾಗಿ ಸಾಧನೆಯಾಗುತ್ತವೆ ಎಂದು

ಹೇಗೆ ತಿಳಿಯುವೆ ? 30 ಅಥವಾ 60 ಗಂಟೆಗಳು ಏಕಾಗಬಾರದು ? ಎಂತಹ ಶೈಕ್ಷಣಿಕ ಪ್ರಕ್ರಿಯೆಯ ವಿಧಾನವನ್ನು ಅಳವಡಿಸಲಾಗಿದೆ ? ಈ 40 ಗಂಟೆಗಳು ಮೋಡಿ ಮಾಡುವಂತೆ ಕಾಣುತ್ತವೆ. 200 ಗಂಟೆಗಳ ನಂತರ ಕಲಿಕೆ ಅಸ್ಥಿರ ಮತ್ತು ಅಸಮರ್ಪಕವಾಗಿರುತ್ತದೆ.ಅವು 40 ಗಂಟೆಗಳಲ್ಲಿ ಸ್ಥಿರ, ಸಮರ್ಪಕ ಮತ್ತು ಸ್ವತಂತ್ರ ಕಲಿಕೆಗಳಾಗಲು ಸಾಧ್ಯವೇ ? ಇಲ್ಲ. ಇದು ಸಾಧ್ಯವಾಗದು, ದಾಟು ಪ್ರಾಥಮಿಕ (Bridge Primer)ವು ಭಿನ್ನರೀತಿಯ ಕಲಿಕಾ ಪ್ರಕ್ರಿಯೆಯೆಡೆಗೆ ಸಾಗಿಸುವ ಪ್ರಜ್ಞಾಪೂರ್ವಕ ಪ್ರಯತ್ನ. ಈ ಭಿನ್ನರೀತಿಯ ಕಲಿಕಾ ಪ್ರಕ್ರಿಯೆಗಳು ಎರಡು ವರ್ಷ ಕಾಲ ಉಳಿದು, ಅನೇಕಾನೇಕ ಕಲಿಕೆ ಮಾಡುವವರಿಗೆ ಕೌಶಲಗಳನ್ನು ಉಳಿಸಿಕೊಳ್ಳಲು ಮತ್ತು ವೃದ್ಧಿಸಿಕೊಳ್ಳಲು ನೆರವಾಗುತ್ತವೆ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

*4*

ಸತ್ಯೇನ್ : ಮೊಯಿತ್ರಾ ಸಮಿತಿಯ ವರದಿಯ ಪ್ರಕಾರ ಇಡೀ ಕಲಿಕಾ ಪ್ರಕ್ರಿಯೆಯನ್ನು ಈ ರೀತಿ ಅರ್ಥಮಾಡಿಕೊಳ್ಳಲಾಗಿತ್ತು. ಆದರೆ ಈವರೆಗಿನ ಸಾಕ್ಷರೋತ್ತರ ಕಾರ್ಯಕ್ರಮದ ಕೆಟ್ಟ ಅನುಭವ ನಮ್ಮನ್ನು ಯೋಚಿಸುವಂತೆ ಮಾಡುತ್ತದೆ. ಈಗ ನಮಗನಿಸಿರುವಂತೆ ಸಾಕ್ಷರೋತ್ತರತೆಯ ಕೆಲವು ಮಾರ್ಗೋಪಾಯಗಳಾದರೂ 6 ತಿಂಗಳ ಕಾಲಾವಧಿಯಲ್ಲಿಯೇ ಚಾಲ್ತಿಯಲ್ಲಿದ್ದು, ಮೂರನೇ ಪ್ರಾಥಮಿಕ ಮುಗಿದನಂತರ ಅವು ಪೂರ್ಣಪ್ರಮಾಣದಲ್ಲಿ ಅನುಷ್ಠಾನಗೊಳ್ಳಬೇಕು. (''ಸಾಕ್ಷರೋತ್ತರಕ್ಕೆ ಸ್ಥಿತ್ಯಂತರ'' ವಿಭಾಗ ನೋಡಿ) ಪ್ರಾಥಮಿಕ ಅಥವಾ ಪಠ್ಯಪುಸ್ತಕ ಆಧಾರಿತ ಸ್ವಯಂಬೋಧಕನ ಮಾರ್ಗದರ್ಶನ ಕಾರ್ಯವು ಇದರ ಕೇಂದ್ರ ಬಿಂದು ಮತ್ತು ಇದು PL-IIಕ್ಕೆ ಕೊನೆಗೊಂಡರೂ, ಇತರ ಕಲಿಕಾಮಾರ್ಗೋಪಾಯಗಳು ಮುಂದುವರಿಯುತ್ತವೆ ಘೋಷಣೆ ಎಂದಿಗೂ ಅಂತಿಮ ಕಾರ್ಯಕ್ರಮವಲ್ಲ (ಹಂತವಲ್ಲ) ಅದು ''ಮಧ್ಯಕಾಲಿಕ ಮೌಲ್ಯಮಾಪನದ ವರದಿ'' ಮಾತ್ರ.

ನಿರೂಪಕ : ಪ್ರೇಮ್ ಈ ಕಾರ್ಯಕ್ರಮದಲ್ಲಿ 3 ಪ್ರಾಥಮಿಕಗಳಿರಬೇಕು. ಒಂದು PL-1ಪಠ್ಯ ಮತ್ತು ಎಲ್ಲಾ ಸಂವಹನದ ಒಟ್ಟು ಅವಧಿ 240 ಗಂಟೆಗಳಿರಬೇಕು ಎಂದು ನೀನೂ ಕೂಡ ಒಪ್ಪುವುದರಿಂದ ಮುಂದೆ ಯಾವುದೇ ವಾದಕ್ಕೆ ಅವಕಾಶವಿಲ್ಲ. ಇದು ಕೇವಲ ಪದವನ್ನು ಅರ್ಥಮಾಡಿಕೊಳ್ಳುವುದು ಎನಿಸುವುದಿಲ್ಲವೇ ? ಎಲ್ಲರಿಗೂ ಗ್ರಂಥಾಲಯ ಒದಗಿಸುವಿಕೆ ಮತ್ತು ಪಠ್ಯೇತರ ಓದುವಿಕೆಗೆ ಅವಕಾಶನೀಡುವುದು, ಗುಂಪು ಚರ್ಚೆಗಳಾಗಬೇಕೆಂಬುದು ಸರ್ವಸಮ್ಮತ.

ಪ್ರೇಮ್ : ಬಹುಶಃ ಅನಕ್ಷರಸ್ಥರು ಅಥವಾ ಅತಿಸಾಕ್ಷರರು ಜಿಲ್ಲೆಯಲ್ಲಿ ಉಳಿದಿರುವ ಕಾರಣ ಇದನ್ನು ''ಸಂಪೂರ್ಣ ಸಾಕ್ಷರತಾ ಆಂದೋಲನದ ದ್ವಿತೀಯ ಹಂತ'' ಅಥವಾ ಸಂಪೂರ್ಣ ಸಾಕ್ಷರತಾ ಆಂದೋಲನದ ಮುಂದುವರಿಕೆ ಎಂದು ಕರೆಯಬಹುದು. ಕೆಲವು ಸಂಪೂರ್ಣ ಸಾಕ್ಷರತಾ ಆಂದೋಲನಗಳಲ್ಲಿ ಕೆಲವೇ

ತಾಲ್ಲೂಕುಗಳಲ್ಲಿ ಮೊದಲು ಪ್ರಾರಭಿಸುವುದರಿಂದ ಸಂಪೂರ್ಣ ಸಾಕ್ಷರತಾ ಆಂದೋಲನದ ದ್ವಿತೀಯ ಹಂತ ಎಂದು ಹೇಳುವುದರಲ್ಲಿ ಸಮಸ್ಯೆಗಳಿವೆ. ಉದಾ. ಮೊದಲನೇ ಹಂತದಲ್ಲಿ 4 ತಾಲ್ಲೂಕು ಮತ್ತು ಎರಡನೇ ಹಂತದಲ್ಲಿ ಐದು ತಾಲ್ಲೂಕು ಇತ್ಯಾದಿ. ಆದುದರಿಂದ ಸಾಕ್ಷರೋತ್ತರತೆಯನ್ನು ''ಸಂಪೂರ್ಣ ಸಾಕ್ಷರತಾ ಆಂದೋಲನದ ದ್ವಿತೀಯ ಹಂತ'' ಎಂದು ಕರೆದರೆ ಮತ್ತೊಂದು ಸಮಸ್ಯೆ ಹುಟ್ಟಿಕೊಳ್ಳುತ್ತದೆ. ಅಥವಾ ನಾವು ಸಂಪೂರ್ಣ ಸಾಕ್ಷರತಾ ಆಂದೋಲನದ ನಂತರದ ಹಂತ ಅಥವಾ ಕ್ರೋಢೀಕರಣ ಮತ್ತು ನಿರಂತರ ಶಿಕ್ಷಣದ ಹಂತ ವೆಂದು ಕರೆಯೋಣವೆ ? ಅಥವಾ ಪ್ರತಿ ಜಿಲ್ಲೆಯೂ ತನ್ನದೇ ಆದ ಹೆಸರನ್ನು ಕೊಡಲು ಹೇಳೋಣವೆ ? ಇದು ಮತ್ತಷ್ಟು ಗೊಂದಲಕ್ಕೆ ಕಾರಣವಾಗುವುದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

5

ಆದರೆ ನನ್ನ ಆತಂಕಕ್ಕೆ ಮತ್ತೊಂದು ಕಾರಣವಿದೆ. ಇದು ಕೇವಲ ''ಪದದ ಅರ್ಥ ಹೇಳುವುದಷ್ಟೆ'' ಅಲ್ಲ ಇದು ''ಕ್ರಿಯಾತ್ಮಕತೆ ಮತ್ತು ಅರಿವಿನ ವಿಭಾಗ'' ಎಂಬುದು ತಿಳಿದಿದೆ. ಸಂಪೂರ್ಣಸಾಕ್ಷರತಾ ಆಂದೋಲನದ ನೆರವಿನಿಂದ ಕಲಿಕಾ ಕೌಶಲಗಳನ್ನು ನೀಡುವುದರ ಮೂಲಕ ಜನರ ಆತ್ಮವಿಶ್ವಾಸವನ್ನು ವೃದ್ಧಿಸಬೇಕೆಂಬುದು ನಮಗೆ ಗೊತ್ತು.ಆದರೆ ಈ ಕೆಲಸ ಸಮರ್ಪಕವಾಗಿ ಆಗುತ್ತಿಲ್ಲ. ಹೆಚ್ಚು ಅಡಚಣೆಗಳು ಕಲಿಕಾಕೌಶಲಗಳ ಸಾಧನೆಯನ್ನು ಮೊಟಕುಗೊಳಿಸಿವೆ. ಹಾಗೆಯೇ ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶಗಳನ್ನು ಅರ್ಥಮಾಡಿಸುವಲ್ಲಿಯೂ ಅನೇಕ ಸಮಸ್ಯೆಗಳು ತಲೆದೋರಿವೆ. ಸಾಕ್ಷರೋತ್ತರ ಕಾರ್ಯಕ್ರಮ ಅಥವಾ ನಿರಂತರ ಮತ್ತು ನಿರಂತರಶಿಕ್ಷಣ (C & CE Phase) ಅವಧಿ ಇದನ್ನೇ ಮುಖ್ಯಗುರಿಯಾಗಿಸಿ ಕೊಳ್ಳಬೇಕಾಗಿದೆ. ಈ ಹಂತದಲ್ಲಿ ಪ್ರಾಥಮಿಕದ ಸಂವಹನ ಮುಖ್ಯವಾಗಿ ಹೆಚ್ಚು ಸಾಧಿಸಲಾರದು. ಆದರೆ ಬೇರೆ ಕಲಿಕಾ ಮಾರ್ಗೋಪಾಯಗಳು ಮುಖ್ಯ ಪಾತ್ರ ವಹಿಸುತ್ತವೆ. ಆದ್ದರಿಂದ ಈ ಗುರಿಯನ್ನು ಸಮರ್ಪಕವಾಗಿ ಸಾಧಿಸಲು ನಾವು ಒಂದು ಅಥವಾ ಎರಡು ವರ್ಷದ ಅವಧಿಯ ಪ್ರಯತ್ನಗಳನ್ನು ಯೋಜಿಸಬೇಕಾಗುತ್ತದೆ. ರಾಷ್ಟ್ರೀಯ ಸಾಕ್ಷರತಾ ನಿಯೋಗ ತನ್ನ ವ್ಯಾಖ್ಯಾನದಲ್ಲಿ ಹೇಳಿರುವ ಕ್ರಿಯಾತ್ಮಕ ಸಾಕ್ಷರತೆ ಧ್ಯೇಯೋದ್ದೇಶವನ್ನು ನಾವು ಮರೆಯಬಾರದು.

ಮುಸ್ತಾಕ್: ನಾನು ಇದನ್ನು ಸರ್ವಥಾ ಒಪ್ಪುವುದಿಲ್ಲ ನಾನು ಕೊಡುವ ಕಾರಣಗಳೇನೆಂದರೆ a)ಕ್ರಿಯಾತ್ಮಕತೆ ಮತ್ತು ಅರಿವು ಎಂದರೇನು ? ಯಾರೂ ಸಹ ಇದು ಸಾಧನೆಯಾಗಿರುವುದನ್ನು ಮೌಲ್ಯಮಾಪನ ಮಾಡಲಾರರು. ಇದನ್ನು ವ್ಯಾಖ್ಯಾನ ಕೂಡ ಮಾಡಿಲ್ಲ. ಈ ಪದವನ್ನು ಹಲವರು ಹಲವು ರೀತಿಯಲ್ಲಿ ಅರ್ಥೈಸಿದ್ದಾರೆ. b) ಯಾವ ಸಂಪೂರ್ಣ ಸಾಕ್ಷರತಾ ಆಂದೋಲನ ಅಥವಾ ವಯಸ್ಕ ಶಿಕ್ಷಣ ಕಾರ್ಯಕ್ರಮ ಇದನ್ನು ಸಾಧಿಸಿಲ್ಲ. ಇಲ್ಲಿ

ಸ್ವಯಂಬೋಧಕನ ಮೂಲ ವಿದ್ಯಾಭ್ಯಾಸದ ಮಟ್ಟವನ್ನೂ ಮರೆಯುವಂತಿಲ್ಲ. ನಾವು ಕೇವಲ ಅವರಿಗೆ ಪ್ರಾಥಮಿಕ ಕಲಿಸುವುದರ ಬಗ್ಗೆ ಮಾತ್ರ ತರಬೇತಿ ನೀಡಿರುತ್ತೇವೆ c)ಸಾಧಿಸ ಲಾಗಿರುವ ಕಲಿಕೆಗೆ ಒತ್ತುಕೊಟ್ಟು ಪುನರ್ ತರಬೇತಿ ನೀಡದೆ ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶವನ್ನು ಸಂವಹನ ನಡೆಸುವುದು ಅಸಾಧ್ಯ. ಹಾಗೆ ಮಾಡುವುದು ಅಪಾಯ ಕೂಡ. ನನ್ನನ್ನು ನಂಬಿ, ಈ ಆಂದೋಲನದಲ್ಲಿ ಸಾಕ್ಷರತಾ ಕೌಶಲ ಸಾಧನೆಯಾಗುತ್ತದೆಂದು ನಿರೀಕ್ಷಿಸೋಣ ಮತ್ತು ಇದು ಸವಾಲು ಕೂಡ. ಒಂದು ಪಕ್ಷ ನಾವು ಇದನ್ನು ಸಾಧಿಸಿದರೆ, ಅದು ಅಲ್ಪ ಸಾಧನೆಯೇನಲ್ಲ.

ಪ್ರೇಮ್: ಮೊದಲನೆಯದಾಗಿ ವ್ಯಾಖ್ಯಾನವೇ ಒಂದುಅಡಚಣೆಯಾಗಬಾರ ದೆಂದು ನನ್ನಅನಿಸಿಕೆ.ನವಸಾಕ್ಷರರು ಅಥವಾ ಅನಕ್ಷರಸ್ಥರಿಗೆ ತಮಗೇನುಬೇಕೆಂದು ತಿಳಿದಿದೆ. ಅವರೇ ನಮಗೆ ಅದರ ಬಗ್ಗೆ ಹೇಳುತ್ತಾರೆ (ನಾವು ಕೇಳಿದರೆ ಮಾತ್ರ) ನಾವೂ ಕೂಡ ಕೆಲವಕ್ಕೆ ಆದ್ಯತೆ ಕೊಡಬೇಕಾಗಿದೆ. ಉದಾ. ಕಾನೂನುಶಿಕ್ಷಣ, ಅತಿಸಾರ ಚಿಕಿತ್ಸೆ ಇತ್ಯಾದಿ, ಆದರೂ ನಾವು ಆದ್ಯತೆ ಪಟ್ಟಿ ತಯಾರಿಸಿಕೊಂಡು, ಪ್ರತಿಯೊಂದು ಗುಂಪಿಗೂ ನೀಡಬೇಕಾಗುತ್ತದೆ. ಇದನ್ನು ಮಾಡುವುದು ಕಷ್ಟವಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

6

ಎರಡನೆಯದಾಗಿ : ಈವರೆಗಿನ ನಮ್ಮ ವಿಫಲತೆಗೆ ''ನಿರಂತರ ಪ್ರಯತ್ನದ ಕೊರತೆ''ಬಿಟ್ಟರೆ ಬೇರೆ ಕಾರಣ ಇಲ್ಲ. ಹಿಂದೆ ಸಾಮೂಹಿಕ ಆಂದೋಲನದಲ್ಲಿಯೂ ವಿಫಲರಾಗಿದ್ದೇವೆ. ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ನಮಗೆ ಮಿತಿಗಳಿವೆ ಆದರೆ ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ಖಂಡಿತವಾಗಿ ನಾವು ಸಾಕಷ್ಟು ನೀಡಬಹುದು ಮಿಗಿಲಾಗಿ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶದ ಸಂವಹನವನ್ನೂ ಸುಧಾರಿಸಬಹುದು. ಈ ಅಂಶಗಳನ್ನು ಪರಿಚಯಿಸುವ ಪದ್ಧತಿಗಳ ಬಗ್ಗೆ ಇತ್ತೀಚೆಗೆ ಸುಧಾರಣೆಯೂ ಆಗಿದೆ.

ಮೂರನೆಯದಾಗಿ : ಈಗಿನ ಮೌಲ್ಯಮಾಪನ ಪದ್ಧತಿಯ ಅಸಾಮರ್ಥ್ಯದ ಬಗ್ಗೆ ನಾನು ಕಳವಳಗೊಂಡಿಲ್ಲ. ನಿರ್ದಿಷ್ಟಕ್ಷೇತ್ರದಲ್ಲಿ ನಾನೇನನ್ನು ಕೊಡ ಬೇಕಾಗಿದೆ ಎಂದು ಒಂದು ಬಾರಿ ನಿರ್ಧರಿಸಿದ ಮೇಲೆ, ನಮ್ಮ ಮೌಲ್ಯಮಾಪಕರ ಸೃಜನಶೀಲತೆ ಮತ್ತು ಕೌಶಲಗಳು ಮೌಲ್ಯಮಾನ ವಿಧಿಗಳೊಂದಿಗೆ ಅದರ ಸರಿಯಾದ ಪದ್ಧತಿಯನ್ನು ರೂಪಿಸುತ್ತವೆಂದು ನಾನು ನಂಬುತ್ತೇನೆ.

ನಾಲ್ಕನೆಯದಾಗಿ : ''ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶ'' ಕಾರ್ಯಕ್ರಮದ ಹಳಿತಪ್ಪಿ ದೂರ ಹೋಗುತ್ತದೆಂದು ನನಗನ್ನಿಸುವುದಿಲ್ಲ. ಅಲ್ಲದೆ ಅದರ

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

7

ಕಾಣಿಕೆ ಅಪಾರ. ಕಾರ್ಯಕ್ರಮವನ್ನು 6 ರಿಂದ 8 ತಿಂಗಳವರೆಗೆ ಉಳಿಸಿಕೊಂಡು ಹೋಗುವುದು ತುಂಬಾ ದೊಡ್ಡ ಸಮಸ್ಯೆ ಎಂಬುದು ನೆನಪಿರಲಿ. ಕಲಿಕೆಯ ವಿಷಯವನ್ನು ಅವರ ಸಮಸ್ಯೆಗಳಿಗೆ ಮತ್ತು ಜೀವನ ಕ್ರಮಕ್ಕೆ ಹೊಂದಾಣಿಕೆ ಮಾಡದಿದ್ದರೆ, ಕಾರ್ಯಕ್ರಮವನ್ನು ಉಳಿಸುವುದು ಮತ್ತು ಸಾಕ್ಷರತಾ ಕೌಶಲಗಳನ್ನು ಸಾಧನೆ ಮಾಡುವುದನ್ನು ನಿರೀಕ್ಷಿಸಲಾಗದು. ಅವರ ಸಮಸ್ಯೆಗಳೊಂದಿಗೆ ಕಲಿಕಾ ಅಂಶಗಳನ್ನು ಒಂದುಗೂಡಿಸದೇ ಇರುವ ಯೋಜನೆ ವಿಫಲಗೊಳ್ಳುವುದೇ ಹೆಚ್ಚು. ಇಡೀ ಸಂಪೂರ್ಣ ಸಾಕ್ಷರತಾ ಆಂದೋಲನದ ಪರಿಕಲ್ಪನೆಗಳು ಈ ಹಂತವನ್ನು ತಲುಪಿರುವುದು ಅಂತಹ ಬದ್ಧತೆಯಿಂದ ಎಂಬುದು ಸತ್ಯ ಜನರ ದೈನಂದಿನ ಸಮಸ್ಯೆಗಳಿಗೆ ಸಾಕ್ಷರೋತ್ತರ ಕಾರ್ಯಕ್ರಮವ ಸ್ಪಂದಿಸದಿದ್ದರೆ ಸಾಕ್ಷರೋತ್ತರ ಕಾರ್ಯಕ್ರಮವಷ್ಟೇ ಏಕೆ? ಸಂಪೂರ್ಣ ಸಾಕ್ಷರೋತ್ತರ ಕಾರ್ಯಕ್ರಮಗಳೂ ವಿಫಲವಾಗುತ್ತದೆ.

ನಿರೂಪಕ : ಆದರೆ ಸಾಕ್ಷರೋತ್ತರ ಕಾರ್ಯಕ್ರಮವಾದ ಅರ್ಥಕಂಡುಕೊಳ್ಳುವಿಕೆಗೂ ಈಗ ಮಾಡಿದ ಚರ್ಚೆಗೂ ಏನು ಸಂಬಂಧ ?

ಪ್ರೇಮ್ : ಸಂಬಂಧವಿಷ್ಟೇ, ಇಡೀ ಎರಡು ವರ್ಷಾವಧಿಯ ಸಾಕ್ಷರೋತ್ತರ ಕಾರ್ಯಕ್ರಮದುದ್ದಕ್ಕೂ ಕ್ರಿಯಾತ್ಮಕತೆ ಮತ್ತು ಅರಿವಿನ ಪರಿಕಲ್ಪನೆಯನ್ನು ಸಂವಹನಗೊಳಿಸುತ್ತಾ ಬಂದರೆ ಯೋಜಿತರೀತಿಯಲ್ಲಿ ಉದ್ದೇಶಿತ ಗುರಿಯನ್ನು ತಲುಪಬಹುದು, ಸಮರ್ಪಕವಾದ ಯೋಜನೆ ಮತ್ತು ಸಾಕ್ಷರೋತ್ತರತೆಯ ಎಲ್ಲಾ ವಿಚಾರಗಳ ಅರಿವಿನ ಸುಧಾರಣೆ ಮತ್ತು ಕಲಿಕೆಯ ಮಾರ್ಗೋಪಾಯಗಳ ಅರಿವಿನ ಸುಧಾರಣೆ ನಮ್ಮನ್ನು ಗುರಿಯ ಸಮೀಪಕ್ಕೆ ಒಯ್ಯುತ್ತದೆಂದು ನನ್ನ ನಂಬಿಕೆ ಇದೊಂದು ರೋಮಾಂಚಕಾರಿ ವಿಚಾರ ಕೂಡ.

ಮುಸ್ತಾಕ್ : ಒಳ್ಳೆಯದು, ಇದು ಸಾಧ್ಯವಾಗುವುದಾದರೆ ಇನ್ನೂ ಹೆಚ್ಚು ಸುಧಾರಿಸಲ್ಪಟ್ಟರೆ ನನ್ನ ಆಕ್ಷೇಪಣೆಗಳೇನೂ ಇಲ್ಲ. ಆದರೆ ಕಡ್ಡಾಯವಾಗಿ ಈ ಸಾಧನೆಯನ್ನು ಮಾಡಿ,ಎಲ್ಲಾದರೊಂದು ಕಡೆ ಮೌಲ್ಯಮಾಪನ ಮಾಡುವವರೆಗೆ ಇದನ್ನು ಸಾಕ್ಷರೋತ್ತರ ಕಾರ್ಯಕ್ರಮ ಎಂದು ಕರೆಯಬೇಡ.

ನಿರೂಪಕ : ಹಾಗಾದರೆ ''ಸಾಕ್ಷರೋತ್ತರ ಕಾರ್ಯಕ್ರಮ'' ಎಂದರೇನು ?

ಸಂಪಾದಕರ ಟಿಪ್ಪಣಿ: ಕ್ರಿಯಾತ್ಮಕ ಸಾಕ್ಷರತೆ'' ಎಂಬ ಪದದ ಮೂಲಾರ್ಥವು ಬೇರೆ ರೀತಿಯಲ್ಲಿ ಅರ್ಥವನ್ನು ಕೊಡುತ್ತದೆ ಎಂಬುದು ನಮ್ಮಗಮನದಲ್ಲಿದೆ. ಇಲ್ಲಿ ಈ ಪದವನ್ನು ರಾಷ್ಟ್ರೀಯಸಾಕ್ಷರತಾ ನಿಯೋಗದ ಧ್ಯೇಯೋದ್ದೇಶಗಳ ವ್ಯಾಖ್ಯೆಗಳಿಗನುಗುಣವಾಗಿ ಬಳಸಿದೆ. ವಿಶೇಷವಾಗಿ ರಾಷ್ಟ್ರೀಯ ಸಾಕ್ಷರತಾ ನಿಯೋಗದ ಧ್ಯೇಯೋದ್ದೇಶಗಳ 2,3 ಮತ್ತು 4ನೇ ಪ್ಯಾರಾದಲ್ಲಿ ಇದರ ಬಗ್ಗೆ ಕೊಡಲಾಗಿದೆ.

ಚರ್ಚೆ 2

# ಸಾಕ್ಷರೋತ್ತರ ಆಂದೋಲನವೋ ಅಥವಾ ಸಂಪೂರ್ಣ ಸಾಕ್ಷರತಾ ಆಂದೋಲನದ ದ್ವಿತೀಯ ಹಂತವೊ ?

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

8

ಕುಮಾರ್: ಸಾಕ್ಷರೋತ್ತರ ಕಾರ್ಯಕ್ರಮದ ಬಹುತೇಕ ಪ್ರಸ್ತಾವನೆಗಳಲ್ಲಿ ನಮ್ಮ ಗಮನವೆಲ್ಲಾ ನವಸಾಕ್ಷರರ ಕಡೆಗೆ ಇರುತ್ತದೆ. ಆದರೆ ನಮ್ಮ ಅನೇಕ ಆಂದೋಲನಗಳಲ್ಲಿ ಹೊರಬಿದ್ದವರು ಅಥವಾ ನೋಂದಾವಣೆಯಾಗದವರು ಹೆಚ್ಚು ಸಂಖ್ಯೆಯಲ್ಲಿರುತ್ತಾರೆ. ಅವರ ಬಗ್ಗೆ ಯೋಜನೆ ಏನು.? ನಮ್ಮ ಸಾಕ್ಷರೋತ್ತರ ಯೋಜನೆಗಳು ಈ ಕ್ಷೇತ್ರದ ಬಗ್ಗೆ ಮೌನ ವಹಿಸಿವೆ.

ಅನಿತಾ : ವಿಶ್ವದಾದ್ಯಂತ ಎಲ್ಲಾ ಆಂದೋಲನಗಳಲ್ಲಿ ಸುಮಾರು 20-30% ಕಲಿಕೆ ಮಾಡುವರು ಸಮರ್ಪಕ ಕಲಿಕಾಮಟ್ಟವನ್ನು ಸಾಧಿಸುತ್ತಾರೆ. ಸುಮಾರು 40-60% ಕಲಿಕೆ ಮಾಡುವವರು ಅಸ್ಥಿರ ಕಲಿಕೆಯ ಹಂತದಲ್ಲಿರುತ್ತಾರೆ ಮತ್ತು ಸುಮಾರು 20-40% ಕಲಿಯುವವರು ಅಪೇಕ್ಷಿತ ಮಟ್ಟವನ್ನು ಸಾಧಿಸಲಾರರು.

ಪ್ರೇಂ : ಮತ್ತೆ ಅತ್ಯುತ್ತಮ ಆಂದೋಲನಗಳಲ್ಲಿ ಸಹ ಅನೇಕ ಕಾರಣಗಳಿಂದ ಕೇವಲ 60%ರಷ್ಟು ರಾಷ್ಟ್ರೀಯ ಸಾಕ್ಷರತಾ ಆಯೋಗದ ಯೋಜಿತ ಅರ್ಹತೆಗಳು ಸಾಧಿಸಲ್ಪಟ್ಟಿವೆ. ಆದರೆ ಅನೇಕ ಆಂದೋಲನಗಳಲ್ಲಿ ನಾನಾ ಕಾರಣಗಳಿಂದ ಫಲಿತಾಂಶಗಳು ಇನ್ನೂ ನಿರಾಶಾದಾಯಕವಾಗಿವೆ. ಆದುದರಿಂದ ಸಾಮಾನ್ಯವಾಗಿ 30%ರಷ್ಟು ಅಕ್ಷರಸ್ಥರು ಮತ್ತು 70%ರಷ್ಟು ಅನಕ್ಷರಸ್ಥರು ಇರುತ್ತಾರೆ.

ಅಹಮದ್ ನಾವು ಸಾಕ್ಷರೋತ್ತರ ಕಾರ್ಯಕ್ರಮದ ಬಗ್ಗೆ ಚರ್ಚಿಸುವಾಗ ರಾಷ್ಟ್ರೀಯ ಸಾಕ್ಷರತಾ ಆಯೋಗ ನಿಗದಿಪಡಿಸಿರುವ ಕಲಿಕಾ ಮಟ್ಟವನ್ನು ಸಾಧಿಸಿರುವ ನವಸಾಕ್ಷರತ ಬಗ್ಗೆ ಮಾತ್ರ ಯೋಚಿಸುತ್ತೇವೆ. ಈ ನವಸಾಕ್ಷರರಿಗೇ ಮುಂದಿನ ಯೋಜನೆಯನ್ನು ರೂಪಿಸುವುದರೊಂದಿಗೆ, ಹಣಕಾಸಿನ ಲೆಕ್ಕಾಚಾರ (ಆಯ-ವ್ಯಯ) ಕೂಡ ಇಷ್ಟೇ ಜನಕ್ಕೆ ಸೀಮಿತನಾಗಿರುತ್ತದೆ.

ಅನಿತಾ : ಉಳಿದಿರುವುದನ್ನು ಪ್ರೇರಣಾತ್ಮಕ ಕಾರ್ಯಕ್ರಮ ಎನ್ನಬಹುದು, ಸಹಜವಾಗಿ ಕೆಲವು ಆಂದೋಲನಗಳಲ್ಲಿ ಪ್ರೇರಣಾಕಾರ್ಯಕ್ರಮದಲ್ಲಿ ಬರುವ ಫಲಾನುಭವಿಗಳ ಸಂಖ್ಯೆ ಸಾಕ್ಷರೋತ್ತರ ಕಾರ್ಯಕ್ರಮದ ಫಲಾನುಭವಿಗಳು ಸಂಖ್ಯೆಗಿಂತಲೂ ದೊಡ್ಡದು. ಆದುದರಿಂದ ಪ್ರೇರಣಾತ್ಮಕ ಕಾರ್ಯಕ್ರಮಕ್ಕೆ ಅಥವಾ ಇಂತಹವರಿಗೇ ಆಂದೋಲನ ಹಮ್ಮಿಕೊಳ್ಳಲು ಮತ್ತೆ ಪ್ರತ್ಯೇಕ

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

9

ಆಯವ್ಯಯದ ಯೋಜನೆಯೊಂದಿಗೆ ರಾಷ್ಟ್ರೀಯ ಸಾಕ್ಷರತಾ ಆಯೋಗವನ್ನು ಸಂಪರ್ಕಿಸಬೇಕಾಗುತ್ತದೆ.

ಅಹಮದ್ : ಮತ್ತೇಕೆ ಪ್ರತ್ಯೇಕ ಆಯ-ವ್ಯಯ ಪ್ರಾಥಮಿಕಗಳಿಗಂತೂ ಅಲ್ಲ, ಏಕೆಂದರೆ ಈಗಾಗಲೇ ಇಡೀ ನಿರೀಕ್ಷಿತ ಗುಂಪಿಗೆ (target group) ಹಣ ಮಂಜೂರಾಗಿದೆ. ಉದ್ದೇಶಿತ ಗುಂಪಿನ ಒಂದು ಭಾಗ, ನೋಂದಾಯಿಸಲ್ಪಟ್ಟಿಲ್ಲದಿದ್ದರೆ ಪ್ರಾಥಮಿಕಗಳು ಸಾಕ್ಷರ ಸಮಿತಿಯಲ್ಲಿಯೇ ಇರಬೇಕು. ಒಂದು ಪಕ್ಷ ಎಲ್ಲರೂ ನೋಂದಾಯಿಸಲ್ಪಟ್ಟಿದ್ದರೆ ಪ್ರಾಥಮಿಕ ಕಲಿಯುವುದರಲ್ಲಿಯೇ ಇರಬೇಕು, ವಾತಾವರಣ ನಿರ್ಮಾಣ ಮತ್ತು ಪುನರ್ ತರಬೇತಿಗೆ ಹಲವು ಲಕ್ಷ ಬೇಕಾಗಬಹುದು. ಆದರೆ ಅದಕ್ಕಿಂತ ಹೆಚ್ಚು ಹಣ ಬೇಕಾಗಲಾರದು.

ಸಾಕ್ಷರೋತ್ತರ ಕಾರ್ಯಕ್ರಮದ ಎಲ್ಲಾ ಆಡಳಿತಗಾರರು (ಒಟ್ಟಾಗಿ)ಇಲ್ಲ, ಮೊದಲಿದ್ದ ವ್ಯಕ್ತಿ ಎಲ್ಲಾ ಪ್ರಾಥಮಿಕಗಳನ್ನೂ ಹಂಚಿದ್ದಾನೆ.... ಮತ್ತೆ ಈಗ ಪ್ರಾಥಮಿಕಗಳು ಸ್ವಲ್ಪವೂ ಉಳಿದಿಲ್ಲ, ಅವು ಗ್ರಾಮಗಳಲ್ಲಿ ದೊರೆಯುವುದಿಲ್ಲ.

ಓರ್ವ ಅಧಿಕಾರಿ ಹಾಗಾದರೆ 100 %ರಷ್ಟು ಪ್ರಾಥಮಿಕಗಳನ್ನು ಪಡೆದಿಲ್ಲವೆಂದು ಒಪ್ಪಿಕೊಳ್ಳಿ (ಅವನನ್ನು ಪ್ರತಿಯೊಬ್ಬರು ಉಪೇಕ್ಷಿಸುವರು)

ಅನಿತಾ : ಸಮಸ್ಯೆಗಳನ್ನು ಪಟ್ಟಿಮಾಡಿ, ಅನುಕ್ರಮವಾಗಿ ಚರ್ಚಿಸೋಣ

ಎ) ಉಳಿದಿರುವ ಅನಕ್ಷರಸ್ಥರನ್ನು ಒಳಗೊಳ್ಳುವಂತೆ ಯೋಜನೆ ರೂಪಿಸಬೇಕೆ ?

ಬಿ)ಹೌದಾದರೆ ಯೋಜನೆ ಅನುಷ್ಠಾನಗೊಳಿಸುವ ಸಮಯದಲ್ಲಿ ಕಾರ್ಯಕ್ಷೇತ್ರದಲ್ಲಿ ಸಂಘಟನಾತ್ಮಕವಾಗಿ ಮುಂದುವರಿಯು ತ್ತಿರುವ ಸಾಕ್ಷರೋತ್ತರ ಕಾರ್ಯಕ್ರಮದೊಂದಿಗೆ ಹೇಗೆ ಸಂಯೋಜಿಸಬೇಕು ?

ಸಿ)ಇದಕ್ಕೆ ಅಯವ್ಯಯ ಹೇಗೆ ತಯಾರಿಸಬೇಕು ?

ಕುಮಾರ್ : ಪ್ರಶ್ನೆ ''ಎ'' ಉತ್ತರ ''ಹೌದ''ು, ಅದನ್ನು ನೀನು ತಪ್ಪಿಸಲು ಸಾಧ್ಯವೇ ಇಲ್ಲ, ಅವರು ಬಂದು ಕೇಂದ್ರಗಳಿಗೆ ಸೇರಿಯೇ ಸೇರುತ್ತಾರೆ. ಅಲ್ಲದೆ ಅವರನ್ನು ಬಿಟ್ಟುಬಿಡಬಾರದು. ಅವರಿಗೆ ಯೋಜನೆ ರೂಪಿಸಬೇಕು, ಉತ್ತಮವಾಗಿ ಸಂಯೋಜಿಸಲು

i) ಹಿಂದಿನಂತೆ ಕೇಂದ್ರಗಳು ಕೆಲಸವನ್ನು ಮುಂದುವರಿಸುವುದು ಮತ್ತು ಅಗತ್ಯವಿರುವ ಕಡೆ, ಕೇಂದ್ರದಿಂದ ಹೊರಬಿದ್ದವರನ್ನು ಮತ್ತೆ ಸೇರಿಸಿಕೊಳ್ಳಲು ಹೊಸಕೇಂದ್ರಗಳನ್ನು ಆರಂಭಿಸುವುದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ii) ಒಂದು ವಾರ ಅಥವಾ ಎರಡು ವಾರಗಳಿಗೊಮ್ಮೆ ಗುಂಪು ಚಟುವಟಿಕೆಗಳಿಗಾಗಿ ಕೇಂದ್ರಗಳನ್ನು ಒಂದು ಕಡೆ ಸೇರಿಸುವುದು ಇದು ಸಾಕ್ಷರೋತ್ತರ ಕಾರ್ಯಕ್ರಮದ ಗುಂಪು ಚಟುವಟಿಕೆಗಳಿಗೆ ಅತ್ಯವಶ್ಯಕ.

iii) ತೀವ್ರವಾಗಿ ಮತ್ತು ಯೋಜಿತ ರೀತಿಯಲ್ಲಿ ನವಸಾಕ್ಷರರಿಂದಲೇ ಬೋಧನೆ (ಸಹೃದಯ ಬೋಧನೆ - ಸಹಕಲಿಕೆ) ಮಾಡಿಸುವುದು (Peer Tutoring) ನೀವು ಪ್ರೋತ್ಸಾಹಕ ವಾತಾವರಣ ನಿರ್ಮಾಣಕ್ಕೆ ಪ್ರಾಥಮಿಕಗಳ ಮುದ್ರಣಕ್ಕೆ ಮತ್ತು ತರಬೇತಿಗೆ ಸ್ವಲ್ಪ ಹಣವನ್ನು ಬಳಸಬೇಕು. ಸಾಕ್ಷರೋತ್ತರ ಯೋಜನೆಯ ಪ್ರಸ್ತಾವನೆಯನ್ನು ಬರೆಯುವಾಗ ಎರಡು ವಿಷಯಗಳನ್ನು ಸ್ಪಷ್ಟವಾಗಿ ಮತ್ತು ಪ್ರತ್ಯೇಕವಾಗಿ ತೋರಿಸಬೇಕು. ಪ್ರತಿಯೊಬ್ಬ ಕಾರ್ಯಕರ್ತರನ್ನೂ ಗುರುತಿಸಬೇಕಾಗಿರುವುದರಿಂದ ಸಾಕ್ಷರೋತ್ತರ ಕಾರ್ಯಕ್ರಮವು ಮರುಗಣತಿಯಿಂದಲೇ ಪ್ರಾರಂಭವಾಗಬೇಕು

ಪ್ರೇಮ್: ಪ್ರಶ್ನೆ Aಗೆ ಉತ್ತರ ಹೌದು, ಆದರೆ ಒಂದು ಕರಾರಿದೆ. ಒಂದು ಆಂದೋಲನದಲ್ಲಿ ಗಮನಾರ್ಹ ಸಂಖ್ಯೆಯ ನವಸಾಕ್ಷರಿರುವುದರಿಂದ 50%ರಷ್ಟು ಪ್ರಗತಿ ಸಾಧಿಸಿದ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲೂ ಸಹ ನವಸಾಕ್ಷರರ ಕೌಶಲಗಳನ್ನು ವೃದ್ಧಿಸಲು ಪುನರ್ ತರಬೇತಿಗೆ ಆದ್ಯತೆ ನೀಡಬೇಕಲ್ಲದೆ ಸಂಘಟನೆಯನ್ನು ಬಲಗೊಳಿಸಬೇಕು ಮತ್ತು ಇತರ ಜನಾಂದೋಲನಗಳಿಗೆ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹೊಂದಿಸಬೇಕು. ಇದಕ್ಕೆ ನಾನು ನೀಡುವ ಕಾರಣಗಳಿವು.

ಎ) ಸಂಘಟನಕಾರರು ಮೊದಲನೆಯ ಹಂತದಲ್ಲಿಯೇ ಅನಿರ್ದಿಷ್ಟ ಕಾಲ ಮುಂದುವರಿಯಲಾರರು. ಈ ಎರಡನೇ ಹಂತ ಅವರ ಉತ್ಸಾಹಕ್ಕೆ ನವಚೈತನ್ಯ ನೀಡಲು ಪ್ರಾರಂಭಿಸುವಂತೆ ನೋಡಿಕೊಳ್ಳಬೇಕು.

ಬಿ) ಈಗಾಗಲೇ ನವಸಾಕ್ಷರರಾಗಿರುವವರನ್ನು ಒಗ್ಗೂಡಿಸಲು ಆದ್ಯತೆ ನೀಡಬೇಕೆ ವಿನಃ ಹೊಸದಾಗಿ ನೊಂದಾಯಿಸಲ್ಪಟ್ಟವರನ್ನೆಲ್ಲ ಇದೇನು ಸುಲಭದ ಕೆಲಸವಲ್ಲ, ಶೇ. 25ರಷ್ಟು ಯಶಸ್ಸು ಸಾಧಿಸಿದ ಆಂದೋಲನದಲ್ಲೂ ದೊಡ್ಡಸಂಖ್ಯೆಯ ಜನರನ್ನು ಒಳಪಡಿಸಬೇಕಾಗಿರುವುದರಿಂದ (ಸಾಧಾರಣ ಜಿಲ್ಲೆಯಲ್ಲಿ 10ಲಕ್ಷ ಜನರಿರುತ್ತಾರೆ) ಈ ಬಗ್ಗೆ ನಾನು ಪೂರ್ಣ ಗಮನ ಹರಿಸಬೇಕಾಗಿರುವುದು ಅಗತ್ಯ. ಈ ಎರಡೂ ರೀತಿಯ ಬೇಡಿಕೆಯನ್ನು ಈಡೇರಿಸಲು ನಮ್ಮಿಂದ ಸಾಧ್ಯವಾಗಲಾರದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

*11*

ಕುಮಾರ್: (ಮಧ್ಯಪ್ರವೇಶಿಸಿ) ಆದರೆ ಅವರು (ಅನಕ್ಷರಸ್ಥರು ಮತ್ತು ಹೊರಬಿದ್ದವರು) ಹೇಗಾದರೂ ಬಂದೇ ಬರುತ್ತಾರೆ. ಕಾರ್ಯಕ್ಷೇತ್ರದಲ್ಲಿರುವ ಯಾವುದೇ ಕೇಂದ್ರ ಅಥವಾ ಸಾಕ್ಷರ ವೃತ್ತವನ್ನು ನೋಡಿದರೆ ಕೇವಲ ನವಸಾಕ್ಷರವೇ ಇರುವ ಸಾಕ್ಷರ ವೃತ್ತಗಳು ಕಾಣಸಿಗುವುದಿಲ್ಲ.

ಪ್ರೇಮ್: ಮಧ್ಯೆ ಬಾಯಿಹಾಕಬೇಡ, ಈ ಆಂದೋಲನಕ್ಕೆ ಸೇರಬಯಸುವವರು ಸಾಕ್ಷರೋತ್ತರ ಕಾರ್ಯಕ್ರಮದಿಂದ ಉತ್ಸಾಹಗೊಳ್ಳಬೇಕು ಅಥವಾ ಇತರ ಯಾವ ಕಾರಣದಿಂದ ಒಳಬಂದಿದ್ದರೂ, ಅವರ ಅಪೇಕ್ಷೆಗನುಗುಣವಾಗಿ ಅನುಕೂಲ ಮಾಡಿಕೊಡಬೇಕು. ಅದಕ್ಕಾಗಿ ನೀನು ಸೂಚಿಸಿದ ರೂಪುರೇಷೆಗಳು ಆದರ್ಶವಾಗಿವೆ. ಹೊಸ ನೊಂದಣಿ ಕಾರ್ಯವನ್ನು ಪ್ರಾರಂಭಿಸಲು ಸಾಧ್ಯವೇ ಎಂಬುದೇ ಪ್ರಶ್ನೆ. ಇದು ಅಸಾಧ್ಯವೆಂದು ನನ್ನ ಅಭಿಮತ. ಆದರೂ ಬಿಟ್ಟುಹೋಗಿರುವ ಸಾಕಷ್ಟು ಜನರನ್ನು ಸೇರಿಸಿಕೊಳ್ಳಬಹುದೆಂಬ ಭರವಸೆ (ನಂಬಿಕೆ) ನನಗಿದೆ. ಇವರನ್ನು ಸೇರಿಸಿಕೊಳ್ಳುವ ಕೆಲಸ ಗ್ರಾಮಮಟ್ಟದಲ್ಲೇ ನಡೆಯಬೇಕು. ಜಿಲ್ಲಾ ತಂಡಗಳನ್ನು ಆದ್ಯತೆಗನುಗುಣವಾಗಿ ಕ್ರೋಢೀಕರಿಸಬೇಕಾಗುತ್ತದೆ. ಹೊಸದಾಗಿ ಸೇರುವವರು ಅಥವಾ ನೋಂದಾಯಿಸುವವರು ''ಅವಳಿ ಕೇಂದ್ರವೃತ್ತ''ದಂಥ ಮಾರ್ಗೋಪಾಯಕ್ಕೆ ಒಳಪಡಬಹುದು. (ಸಾಕ್ಷರ ವೃತ್ತದ ಬಗ್ಗೆ ನೀಡಿರುವ ಮಾದರಿಯಲ್ಲಿ ತಿಳಿಸಿರುವಂತೆ) ಆದರೆ ನಾವು ಸಾಕ್ಷರೋತ್ತರ ಕಾರ್ಯಕ್ರಮವನ್ನು ಮತ್ತೊಂದು ಸಾಕ್ಷರತಾ ಆಂದೋಲನವನ್ನಾಗಿ ಮಾಡಬಾರದು.

ಕುಮಾರ್ ನಿನ್ನದು ಮುಗಿಯಿತೆ ?

ಪ್ರೇಮ್: ಹೌದು

ಕುಮಾರ್: ಮೊದಲು ಸಂಪೂರ್ಣ ಸಾಕ್ಷರತಾ ಆಂದೋಲನವು ಒಂದು ವರ್ಷದಲ್ಲಿ ಮುಗಿಯುತ್ತದೆ ಎಂಬ ಪರಿಕಲ್ಪನೆ ಹೋಗಬೇಕು. ಇದು ದೀರ್ಘಾವಧಿಯ ಕೆಲಸ ಜನರು ಸಿದ್ಧರಿದ್ದರೆ, ಅವರು ಹೆಚ್ಚು ಕಾಲ ಮುಂದುವರಿಸಲು ಸಮ್ಮತಿಸುತ್ತಾರೆ (ಒಪ್ಪುತ್ತಾರೆ) ಇಂದಿನ ನಮ್ಮ ಸಮಸ್ಯೆಗಳಿಗೆ ಕಾರಣವೇನೆಂದರೆ ''ಇದು ಒಂದು ವರ್ಷದ ಕೆಲಸ'', ಎಂದು ಹೇಳಿ ಪ್ರಾರಂಭಿಸುತ್ತಿರುವುದು. ಎರಡನೆಯದಾಗಿ ಈ ಹಂತವನ್ನು ಸಾಕ್ಷರೋತ್ತರ ಹಂತ ಎಂದು ಕರೆಯಲೇಬಾರದು. ಇದನ್ನು ಸಾಕ್ಷರತಾ ಆಂದೋಲನದ ದ್ವಿತೀಯ ಹಂತವೆಂದು ಕರೆಯಬೇಕು. ಇದರಲ್ಲಿ ಬದಲಾಗುತ್ತಿರುವ ಸಾಕ್ಷರೋತ್ತರ ಚಟುವಟಿಕೆಗಳಲ್ಲದೆ ಸಾಕ್ಷರತಾ ತರಗತಿಗಳೂ ನಡೆಯಬೇಕು. ಕೆಲವೇ ಸಾವಿರ ನವಸಾಕ್ಷರರಿರುವ ಮತ್ತು 5 ಲಕ್ಷದಷ್ಟು ಅನಕ್ಷರಸ್ಥರಿರುವ ರಾಯಚೂರು, ಕರ್ನೂಲ್ ಗಳಂಥ ಜಿಲ್ಲೆಗಳಲ್ಲಿ ಹೊಸದಾದ ಮರು ಆಂದೋಲನದ ಅವಶ್ಯಕತೆ ಇರುತ್ತದೆ. ಆದುದರಿಂದ ಸಾಕ್ಷರತಾ

ಆಂದೋಲನದ ದ್ವಿತೀಯ ಹಂತವು ನೋಂದಣಿಯಾಗದವರು ಮತ್ತು ಹೊರಬಿದ್ದವರು ಸೂಕ್ತವಾದ ಅವಕಾಶ ಪಡೆಯುವುದಕ್ಕೆ ಒತ್ತು ನೀಡುವ ಸಾಕ್ಷರತಾ ಯೋಜನೆಯಾಗಿರಬೇಕು. ಇದಾಗದಿದ್ದರೆ ''ಸಾಕ್ಷರತಾ ಜಿಲ್ಲೆ'' ಎಂದು ಘೋಷಿಸಲ್ಪಟ್ಟಿರುವ ಜಿಲ್ಲೆಗಳಲ್ಲೂ ಮುಂದಿನ ವರ್ಷಗಳಲ್ಲಿ ದೊಡ್ಡ ಸಂಖ್ಯೆಯ ಅನಕ್ಷರಸ್ಥರಿರುತ್ತಾರೆ.

ಪ್ರೇಮ್: ಸಾಕ್ಷರೋತ್ತರ ಆಂದೋಲನ ಎಂದು ಕರೆಯುವ ಬದಲು ಸಾಕ್ಷರತಾ ಆಂದೋಲನ ಎಂದು ಕರೆಯುವುದಕ್ಕೆ ನನ್ನ ಒಪ್ಪಿಗೆ ಇದೆ ಸಾಕ್ಷರೋತ್ತರತೆಯು ಸಂಪೂರ್ಣ ಸಾಕ್ಷರತಾ ಆಂದೋಲನದ ಎರಡನೇ ಹಂತದ ಮೂಲಾಂಶ. ಇದರ ತೀವ್ರತೆಯು ಸಂಪೂರ್ಣಸಾಕ್ಷರತಾ ಆಂದೋಲನದ ಪ್ರಥಮ ಹಂತದ ಯಶಸ್ಸಿಗೆ ಕಾರಣ.

ಆದಾಗ್ಯೂ 2 ಅಥವಾ 3 ವರ್ಷಗಳ ನಂತರವೂ, ವಯಸ್ಕ ಅನಕ್ಷರಸ್ಥರು ಸಾಕ್ಷರರಾಗಿ ಹೆಚ್ಚು ಸುಧಾರಣೆ ಹೊಂದುತ್ತಾರೆಂದು ನಾನು ಮೊದಲೇ ಹೇಳುವುದಿಲ್ಲ. ಆದುದರಿಂದ ಸಾಕ್ಷರೋತ್ತರ ಮತ್ತು ಅದರ ಪೂರಕ ಆಂದೋಲನಗಳಿಗೆ ಆದ್ಯತೆ ಕೊಡಬೇಕಾಗುತ್ತದೆ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

*12*

ರಾಯಚೂರು, ಚಂಡೀಘಡದಂತಹ ಸ್ಥಳಗಳಲ್ಲಿ ಇಡೀ ಆಂದೋಲನವನ್ನು ಪುನರಾವರ್ತಿಸುವ ಅವಶ್ಯಕತೆ ಇದೆ. ಹಾಗಾದರೆ ಇದನ್ನು ಸಂಪೂರ್ಣ ಸಾಕ್ಷರತಾ ಆಂದೋಲನದ ಪುನಶ್ಚೇತನ + ಸಾಕ್ಷರೋತ್ತರ ಆಂದೋಲನ ಎಂದು ಹೆಸರಿಸಿ ಅಥವಾ ಯೋಜಿಸಿ, ಅನೇಕ ಸಾಕ್ಷರೋತ್ತರ ಚಟುವಟಿಕೆಗಳನ್ನು ಪರಿಚಯಿಸಬಹುದು, ಸಂಪೂರ್ಣ ಸಾಕ್ಷರತಾ ಆಂದೋಲನದ ನಂತರ 2 ರಿಂದ 5 ವರ್ಷಗಳ ಕಾಲ ಮುಂದುವರಿಯುವ ಸಾಕ್ಷರೋತ್ತರ ಅಥವಾ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ಮುಂತಾದವುಗಳಿಗೆ ಒತ್ತುನೀಡಬೇಕಾಗುತ್ತದೆ. ಕೇವಲ 50% ಯಶಸ್ಸು ಸಾಧಿಸಿ ಲಕ್ಷಾಂತರ ನವಸಾಕ್ಷರರಲ್ಲದೆ, ಲಕ್ಷಾಂತರ ಅನಕ್ಷರಸ್ಥರಿರುವ ವಿಶೇಷವಾಗಿ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಗಳ ಮಟ್ಟಿಗಾದರೂ ಇದಾಗಬೇಕು. ಇದು ನಿಜ. ಬಹುಶಃ 2 ರಿಂದ 5 ವರ್ಷಗಳ ನಂತರ ಗಟ್ಟಿಯಾಗಿ ನೆಲೆನಿಂತ ಸ್ವಯಂಸೇವಾ ಜಾಲದ (Volunteer Network) ಸಹಾಯದಿಂದ ಮತ್ತು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದಿಂದ ಅಡಚಣೆಗಳು ಅಂತ್ಯಗೊಳ್ಳುವುದರಿಂದ ಎರಡನೇ ಅಥವಾ ಬಹುಶಃ ಅಂತಿಮ ಸಂಪೂರ್ಣ ಸಾಕ್ಷರತಾ ಆಂದೋಲನದ ಬಗ್ಗೆ ಯೋಚಿಸಬಹುದು.

ಅನಿತಾ : ನಾನು ಗಮನಿಸಿದಂತೆ ನೀವಿಬ್ಬರೂ ಕೆಲವು ಮಾರ್ಪಾಡುಗಳೊಡನೆ ನಿಮ್ಮ ಮೊದಲಿನ ಅಭಿಪ್ರಾಯಗಳಿಗೆ ಅಂಟಿಕೊಂಡಿರುವಿರಿ. ತಮ್ಮ ತಂಡಗಳ ದೃಷ್ಟಿಕೋನಗಳಲ್ಲದೆ, ಧ್ಯೇಯೋದ್ದೇಶಗಳನ್ನಾಧರಿಸಿ ಪ್ರತಿ ಜಿಲ್ಲೆಯನ್ನೂ ಪ್ರಜ್ಞಾಪೂರ್ವಕವಾಗಿ ತನ್ನ ಆದ್ಯತೆಗಳನ್ನು ನಿರ್ಧರಿಸಲು ಮತ್ತು ಅವುಗಳ ಬಗ್ಗೆ ಕೇಂದ್ರೀಕರಿಸಲು ಬಿಡಬೇಕು.

## ಚರ್ಚೆ 3 ಸಾಕ್ಷರೋತ್ತರ ಕಾರ್ಯಕ್ರಮದ ಆರಂಭ ಯಾವಾಗ ?

ವೆಂಕಟೇಶ್ : ಸಾಕ್ಷರೋತ್ತರ ಕಾರ್ಯಕ್ರಮ ಯಾವಾಗ ಆರಂಭವಾಗುತ್ತದೆ ?

ಕಲ್ಯಾಣ್ : ಎಂತಹ ದಡ್ಡ ಪ್ರಶ್ನೆ ? ಸಾಕ್ಷರತಾ ಆಂದೋಲನ ಮುಗಿದನಂತರ ಎಂಬುದು ಸ್ಪಷ್ಟವಲ್ಲವೆ ?

ವೆಂಕಟೇಶ್ : ಅದೇನೋ ಸರಿ, ಹಾಗಾದರೆ ಸಾಕ್ಷರತಾ ಆಂದೋಲನ ಯಾವಾಗ ಮುಗಿಯುತ್ತದೆ ?

ಕಲ್ಯಾಣ್ : ನೋಂದಾಯಿಸಿಕೊಂಡವರೆಲ್ಲಾ ತರಗತಿಗಳಿಗೆ ಹಾಜರಾಗಿ ಕಲಿಕೆ ಮುಗಿಸಿದ ನಂತರ (ಹೊರಬಿದ್ದವರಲ್ಲ)

ವೆಂಕಟೇಶ್ : ಇಷ್ಟೊಂದು ಸರಳವೆ ? ಹಾಗಾದರೆ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಅಕ್ಷರ ಕಲಿಕೆ ಮುಗಿಸಿರುವವರ ಉದಾಹರಣೆಗಳನ್ನು ಗಮನಿಸು, ಅವರಲ್ಲಿ ಹಲವಾರು ರೂಪಗಳಿವೆ. ಕೆಲವರು 5 ತಿಂಗಳಲ್ಲೇ ಮುಗಿಸಿದರೆ, ಮತ್ತೆ ಕೆಲವರು ತರಗತಿಗಳಿಗೆ ಹಾಜರಾಗುತ್ತಿದ್ದಾರೂ 10 ತಿಂಗಳಾದರೂ ಒಂದನೆಯ ಪ್ರಾಥಮಿಕದಲ್ಲೇ ಇರುತ್ತಾರೆ. ಎಲ್ಲರೂ ಕಲಿಕೆ ಮುಗಿಸುವವರೆಗೆ ಕಾದರೆ ಸಾಕ್ಷರೋತ್ತರ ಕಾರ್ಯಕ್ರಮ ಆರಂಭವಾಗುವ ವೇಳೆಗೆ ನಿಮ್ಮ ಉತ್ತಮ ಶಿಕ್ಷಣಾರ್ಥಿಗಳು ಕಲಿತಿರುವುದನ್ನು ಮರೆಯಲಾರಂಭಿಸುತ್ತಾರೆ.

ಅನಿಲ್ : ಇಲ್ಲದ ವಿವಾದವನ್ನು ನೀನೇಕೆ ಹುಟ್ಟುಹಾಕುತ್ತಿದ್ದೀಯ, ಇದು ಎಲ್ಲೂ ಕಾಣುವುದಿಲ್ಲ. ಈಗಾಗಲೇ ಇದರ ಬಗ್ಗೆ ಚರ್ಚಿಸಿ ತೀರ್ಮಾನಿಸಲಾಗಿದೆ. ಮೂರನೇ ಒಂದು ಭಾಗ ಅಥವಾ ಅರ್ಧದಷ್ಟು ಶಿಕ್ಷಣಾರ್ಥಿಗಳು ಮೂರನೇ ಪ್ರಾಥಮಿಕವನ್ನು ಮುಗಿಸಿದ ಮೇಲೆ ಸಾಕ್ಷರೋತ್ತರ ಕಾರ್ಯಕ್ರಮವನ್ನು ಆರಂಭಿಸಬಹುದೆಂದು ನಾವು ಒಪ್ಪಿದ್ದೇವೆ. ಈ ವೇಳೆಗೆ ಸಾಕ್ಷರೋತ್ತರ ಕಾರ್ಯಕ್ರಮದ ಪ್ರಸ್ತಾವನೆಯು ಮಂಡಿಸಲ್ಪಟ್ಟು ರಾಷ್ಟ್ರೀಯ ಸಾಕ್ಷರತಾ ನಿಯೋಗದ ಒಪ್ಪಿಗೆಯೂ ಸಿಕ್ಕಿರಬಹುದು. ಒಂದು ಪಕ್ಷ ಪ್ರಸ್ತಾವನೆಯನ್ನು ಅಂಗೀಕರಿಸುವುದು ತಡವಾದರೆ, ಪ್ರಸ್ತಾವನೆಯ ಅಧಿಕೃತ ಅಧಿಕಾರವನ್ನು ನಿರೀಕ್ಷಿಸುತ್ತಲೇ ಲಭ್ಯವಿರುವ ಹಣದಲ್ಲೇ ಸಾಕ್ಷರೋತ್ತರ ಕಾರ್ಯಕ್ರಮವನ್ನು ಆರಂಭಿಸಬಹುದೆಂಬ ತಿಳುವಳಿಗೆ ನಮಗಿರಬೇಕು. ಆದುದರಿಂದ ಇದರ ಬಗ್ಗೆ ಖಂಡಿತಾಚರ್ಚೆ ಬೇಡ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

*14*

ವೆಂಕಟೇಶ್ ಹಾಗಾದರೆ ಒಂದು ನಿಮಿಷ ತಡೆ, ಸಾಕ್ಷರೋತ್ತರ ಕಾರ್ಯಕ್ರಮದ ಆರಂಭವೆಂದರೇನು ? ಈಗ ಅರ್ಥಮಾಡಿಕೊಂಡಿರುವಂತೆ 4 ಅಥವಾ 5 ಮಾರ್ಗೋಪಾಯಗಳನ್ನು ಇದರಲ್ಲಿ ಅಳವಡಿಸಲಾಗಿದೆ. ಪ್ರಾಥಮಿಕ 4 ಅಥವಾ ಸಾಕ್ಷರೋತ್ತರ ಪಠ್ಯವನ್ನು ಬೋಧಿಸುವುದು ಒಂದು ಮುಖ್ಯ ಅಂಶವಾದರೆ ಪೂರಕ ಓದುವ ಸಾಮಗ್ರಿಯನ್ನು ಒದಗಿಸಿ ಅದರ ಉಪಯುಕ್ತತೆಯನ್ನು ಖಚಿತಪಡಿಸಿಕೊಳ್ಳುವುದು ಮತ್ತೊಂದು ಮುಖ್ಯ ಅಂಶ. ಸಾಕ್ಷರತಾ ವಾತಾವರಣವನ್ನು ಸೃಷ್ಟಿಸಿ ಪಠ್ಯೇತರ ಕಲಿಕೆಗೆ ಅವಕಾಶ ಮಾಡಿಕೊಡುವುದು ಇನ್ನೂ ಒಂದು ಮುಖ್ಯ ಅಂಶ. ಮತ್ತೊಂದು ಮಾರ್ಗೋಪಾಯವೆಂದರೆ ಕೇಂದ್ರ ಅಥವಾ ಹೊಸದಾಗಿ ಸಂಘಟಿಸಿರುವ ''ಸಾಕ್ಷರಸಮೂಹ'' ಗಳಲ್ಲಿ ಹಲವಾರು ಸಾಮೂಹಿಕ ಚಟುವಟಿಕೆಗಳ ಮೂಲಕ ಸಾಕ್ಷರತಾ ಕೌಶಲಗಳನ್ನು ಉಳಿಸಿಬೆಳೆಸುವುದಲ್ಲದೆ ಕ್ರಿಯಾತ್ಮಕ ಸಾಕ್ಷರತೆ ಮತ್ತು ಅರಿವಿನ ಅಂಶಗಳನ್ನು ಸಂವಹನಗೊಳಿಸಬಹುದು. ಹಾಗಾದರೆ, ಮೂರನೇ ಒಂದು ಭಾಗದಷ್ಟು ಶಿಕ್ಷಣಾರ್ಥಿಗಳು ಮೂರನೇ ಪ್ರಾಥಮಿಕವನ್ನು ಮುಗಿಸಿದ ತಕ್ಷಣ ಇಡೀ ಜಿಲ್ಲೆಯಾದ್ಯಂತ ಏಕಕಾಲದಲ್ಲಿ ಈ ಐದೂ ರೀತಿಯ ಚಟುವಟಿಕೆಗಳನ್ನು ಆರಂಭಿಸಬೇಕೆ? ಅಥವಾ ಕೇವಲ ಪ್ರಾಥಮಿಕ-4 ರ ಬೋಧನೆಯನ್ನು ಆರಂಭಿಸಿ ಉಳಿದವುಗಳನ್ನು ತರಗತಿಗಳಿಗೆ ಹಾಜರಾಗುತ್ತಿರುವ ಎಲ್ಲಾ ಶಿಕ್ಷಣಾರ್ಥಿಗಳು ಅವಧಿಯನ್ನು ಮುಗಿಸಿದ ನಂತರ ಆರಂಭಿಸಬೇಕೆಂದು ಅರ್ಥವೇ ?

ಅನಿತಾ : ಒಳ್ಳೆಯದು, ವಾಸ್ತವವಾಗಿ ಸಾಕ್ಷರೋತ್ತರ ಕಾರ್ಯಕ್ರಮ ಆರಂಭಿಸುವ ಮುನ್ನ ಸಾಕ್ಷರತಾ ಆಂದೋಲನ ಮುಗಿಯುವವರೆಗೂ ಕಾಯಲಾಗುತ್ತದೆ. ಹೆಚ್ಚೆಂದರೆ 1/3 ಭಾಗದಷ್ಟು ಶಿಕ್ಷಣಾರ್ಥಿಗಳು ಮೂರನೇ ಪ್ರಾಥಮಿಕವನ್ನು ಮುಗಿಸಿದ ನಂತರವೇ ಪ್ರಾಥಮಿಕ-4ನ್ನು ಪರಿಚಯಿಸಿರ ಬಹುದು.ಇದರಿಂದ ಹೆಚ್ಚೇನೂ ಪ್ರಯೋಜನವಾಗದು. ಈಗ ಎಲ್ಲಾ 5 ಚಟುವಟಿಕೆಗೂ ವಿಶೇಷವಾಗಿ ಓದುವ ಪೂರಕ ಸಾಮಗ್ರಿಯನ್ನು ಒದಗಿಸುವಿಕೆಯಿಂದ ಆರಂಭಿಸಬಹುದೆಂದು ನನ್ನ ಅಭಿಪ್ರಾಯ. ಇದರ ಅರ್ಥವಿಷ್ಟೆ. ಈ ವೇಳೆಗೆ ಈ ಸಾಮಗ್ರಿಗಳ ತಯಾರಿಕೆ ಮುಗಿದಿರಬೇಕು. ಸಾಧ್ಯವಾದರೆ ಸಾಕ್ಷರತಾ ಆಂದೋಲನ ಆರಂಭವಾಗುವ ವೇಳೆಗೆ ಎಲ್ಲಾ ಸಾಮಗ್ರಿಗಳು ಅಥವಾ ಕೆಲವು ಸಾಮಗ್ರಿಗಳಾದರೂ ಸಿದ್ಧವಿರಬೇಕು. ಸಾಕ್ಷರೋತ್ತರ ಕಾರ್ಯಕ್ರಮವನ್ನು ಯೋಜಿಸುವುದು ಸಂಪೂರ್ಣ ಸಾಕ್ಷರತಾ ಆಂದೋಲನದ ಯೋಜನೆಯ ಒಂದು ಭಾಗವಾಗಿರಬೇಕು.

ವೆಂಕಟೇಶ್ : ಕೆಲವು ಸಂಪೂರ್ಣ ಸಾಕ್ಷರತಾ ಆಂದೋಲನಗಳು ಇದನ್ನು ಅರ್ಥಮಾಡಿಕೊಂಡಿವೆ. ಆದರೂ ಕೆಲವು ಸಮಸ್ಯೆಗಳಿವೆ. ಉದಾಹರಣೆಗೆ

ಹೊಸದಾಗಿ ರೂಪಿಸಿದ ಸಾಕ್ಷರತಾ ಸಮೂಹಗಳು ಕೇವಲ ನವಸಾಕ್ಷರರಿಗೆ ಸೀಮಿತವೇ ? ಹೌದಾದರೆ ಪ್ರತಿಗ್ರಾಮದಲ್ಲಿ ಇವು ಸಾಕಷ್ಟು ಇರಲಾರವು, ''ಸಾಕ್ಷರ ಗೋಡೆ'' ಯಂತಹ ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶಗಳನ್ನು ಸಂವಹನಗೊಳಿಸುವಂತಹ ಮಾರ್ಗೋಪಾಯ ಗಳನ್ನು ಉಪಯೋಗಿಸಲು ಸಾಕ್ಷರೋತ್ತರ ಕಾರ್ಯಕ್ರಮ ಜಾರಿಯಾಗುವವರೆಗೂ ಏಕೆ ಕಾಯಬೇಕು ? ಅದೂ ಅಲ್ಲದೆ ತರಬೇತಿ ಇಲ್ಲದೆ ಪ್ರಾಥಮಿಕ 4ನ್ನು ಆರಂಭಿಸಲಾಗುವುದಿಲ್ಲ. ಪ್ರತಿಕೇಂದ್ರ ಅಥವಾ ಪ್ರತಿಗ್ರಾಮದಲ್ಲಿನ ಬಹುರೂಪಿ ಕಲಿಕಾಮಟ್ಟ (ಅಸಮಕಲಿಕೆ)ವನ್ನು ದೃಷ್ಟಿಯಲ್ಲಿಟ್ಟುಕೊಂಡು ಸ್ವಯಂಬೋಧಕರನ್ನು ಗುರುತಿಸಿ ಅವರಿಗೆ ಪ್ರತ್ಯೇಕ ತರಬೇತಿಯನ್ನು ಹೇಗೆ ನೀಡುವುದು ?

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಗ್ರಾಮಗ್ರಂಥಾಲಯವನ್ನು ನಡೆಸಲು ಅಥವಾ ಇತರ ಮಾರ್ಗೋಪಾಯಗಳ ಬಗ್ಗೆ ತರಬೇತಿಯನ್ನು ಹೇಗೆ ವ್ಯವಸ್ಥೆ ಗೊಳಿಸಬೇಕು ? ಅಥವಾ ನಮ್ಮ ಸ್ವಯಂಬೋಧಕರು ತರಬೇತಿ ಯಿಲ್ಲದೆ ಇವುಗಳನ್ನೆಲ್ಲಾ ಮಾಡುತ್ತಾರೆಂದು ನಿರೀಕ್ಷಿಸ ಬಹುದೆ ? ಈ ಮಾರ್ಗೋಪಾಯಗಳನ್ನು ಅನುಷ್ಠಾನ ಗೊಳಿಸುವಂತೆ ಗ್ರಾಮಗಳಿಗೆ ಹೇಳುವುದರಲ್ಲೂ ಕೆಲವು ಸಮಸ್ಯೆಗಳಿವೆ. ಮತ್ತೆ ಇಂದಿನ ಬಹುತೇಕ ಸಂಪೂರ್ಣ ಸಾಕ್ಷರತಾ ಆಂದೋಲನಗಳು ಘೋಷಣೆಯ ನಂತರ ಸ್ಥಗಿತಗೊಳ್ಳುವ ಕಾರಣದಿಂದ ಸಾಕ್ಷರ ಸಮೂಹಗಳನ್ನು ರಚಿಸುವುದು ತುಂಬಾ ಕಷ್ಟ. ಅವುಗಳನ್ನು ಚಟುವಟಿಕೆಯಿಂದಿಟ್ಟುರುವುದು ಇನ್ನೂ ತ್ರಾಸದಾಯಕವೆಂಬುದು ನೆನಪಿರಲಿ.

ರಾಮಾನುಜಂ: ಮತ್ತೊಂದು ಸಮಸ್ಯೆಯ ಕಡೆ ಗಮನ ಹರಿಸೋಣ ಇಂದಿನ ಎಲ್ಲಾ ಸಂಪೂರ್ಣ ಸಾಕ್ಷರತಾ ಆಂದೋಲನಗಳಲ್ಲೂ 2 ತಿಂಗಳ ನಂತರ ಕೇಂದ್ರಗಳಲ್ಲಿ ಆಸಕ್ತಿ ಉಳಿಯುವಂತೆ ಮಾಡುವುದು ಗಂಭೀರ ಸಮಸ್ಯೆಯಾಗಿದೆ. ಶಿಕ್ಷಣಾರ್ಥಿಗಳಿಗೆ ಅಭ್ಯಾಸ ಅಗತ್ಯ. ಅದರಲ್ಲೂ ಮೂರನೇ ಪ್ರಾಥಮಿಕದಲ್ಲಿ ಹೆಚ್ಚು ಬೇಕಾಗುತ್ತದೆ, ಮತ್ತೆ ಈ ನಿರಂತರ ಅಭ್ಯಾಸ ಬೇಸರ ತರಿಸಬಹುದು. ಸೃಜನಾತ್ಮಕ ಗುಂಪು ಚಟುವಟಿಕೆಗಳು ಮತ್ತು ಶಿಕ್ಷಣಾರ್ಥಿಯ ಬದುಕಿನ ಪರಿಸ್ಥಿತಿಗೆ ಸಂಬಂಧಿಸಿದ ''ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶಗಳನ್ನು'' ಒದಗಿಸದ ಹೊರತು ಸಾಕ್ಷರತಾ ಸಾಧನೆ ಕೆಳಗಿಳಿಯಲಾರಂಭವಾಗುತ್ತದೆ. ಈ ಹಂತದಲ್ಲಿ ನಾವು ಪೂರ್ವಸಾಕ್ಷರೋತ್ತರ ಕಾರ್ಯಕ್ರಮ ಅಥವಾ ಸಂಪೂರ್ಣ ಸಾಕ್ಷರತಾ ಆಂದೋಲನದ ಕೊನೆಯ ಹಂತವಾದ ''ಸಾಕ್ಷರತೆಯನ್ನು ಪ್ರಬಲಗೊಳಿಸುವ'' ಅಥವಾ ಸಾಕ್ಷರತೆಯನ್ನು ಸ್ಥಿರಗೊಳಿಸುವ ಅವಧಿಯ ಬಗ್ಗೆ ಮಾತನಾಡ ತೊಡಗಬೇಕೆಂದು ನನ್ನ ಅನಿಸಿಕೆ. ಇದು ಸಾಕ್ಷರತೆಯಿಂದ ಸಾಕ್ಷರೋತ್ತರತೆಗೆ ಬದಲಾವಣೆ ಹೊಂದುವ ಅವಧಿಯಾಗಬೇಕು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು



ವೆಂಕಟೇಶ್ : ನಾನಿದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಬಿಡು, ಸಂಪೂರ್ಣ ಸಾಕ್ಷರತಾ ಆಂದೋಲನದ ಅವಧಿಯಲ್ಲಿ 2 ಅಥವಾ 3 ತಿಂಗಳಿನ ಬೋಧನಾ ಕಾಲದಲ್ಲಿ ಸಾಕ್ಷರೋತ್ತರದಲ್ಲಿಯೇ ಸಾಧ್ಯವಾಗಬಹುದಾದ ಮತ್ತು ಅತ್ಯಂತ ಸೂಕ್ತವೆಂದು ಪರಿಗಣಿಸಲ್ಪಟ್ಟ ಕೆಲವು ಪ್ರಾಥಮಿಕ ಅಂಶಗಳನ್ನು ಪರಿಚಯಿಸಬೇಕು. ಇದರ ಬಗ್ಗೆ ತರಬೇತಿಯನ್ನು ಸ್ವಯಂಬೋಧಕನಿಗೆ ಎರಡನೇ ಪ್ರಾಥಮಿಕಕ್ಕೆ ನೀಡುವ ತರಬೇತಿಯೊಂದಿಗೆ ನೀಡಬೇಕು ಮತ್ತು ಈ ಅವಧಿಯನ್ನು ''ಕಲಿಕಾಕೌಶಲಗಳನ್ನು ವೃದ್ಧಿಸುವ ಅಥವಾ ಬಲಗೊಳಿಸುವ'' ಅವಧಿಯೆಂದೋ ಅಥವಾ ಕೇಂದ್ರಗಳನ್ನು ಕುತೂಹಲಕಾರಿಯಾಗಿ'' ನಡೆಸುವ ಅವಧಿಯೆಂದೇ ಹೆಸರಿಸಬೇಕು. ಈ ಹಂತದಲ್ಲಿ ಎರಡು ವಾರಗಳಿಗೊಮ್ಮೆ ಸಾಧ್ಯವಾದರೆ ವಾರಕ್ಕೊಮ್ಮೆಯಾದರೂ ಕೇಂದ್ರಗಳನ್ನು ಒಟ್ಟಿಗೆ ತಂದರೆ ''ಸಾಕ್ಷರತಾ ಸಮೂಹಗಳನ್ನೂ'' ರಚಿಸಲು ಮುಂದೆ ಸಾಧ್ಯವಾಗಬಹುದು.

ಮೂರನೇ ಪ್ರಾಥಮಿಕದ ತರಬೇತಿಯೊಂದಿಗೆ (ಈ ವೇಳೆಗೆ 1/3 ಭಾಗದಷ್ಟು ಶಿಕ್ಷಣಾರ್ಥಿಗಳು ಮೂರನೇ ಪ್ರಾಥಮಿಕ ಕಲಿಯುತ್ತಿರಬಹುದು) ಓದುವ ಪೂರಕ ಸಾಮಗ್ರಿಯ ಬಳಕೆಯ ಬಗ್ಗೆ ಮತ್ತು ಪಠ್ಯೇತರ ಓದುವ ಅವಕಾಶಗಳನ್ನು ಪರಿಚಯಿಸುವ ಬಗ್ಗೆ ತರಬೇತಿ ನೀಡಬಹುದು. ಪ್ರತಿ ಶಿಕ್ಷಣಾರ್ಥಿಯು ಅಥವಾ ಪ್ರತಿಕೇಂದ್ರವು ಪ್ರಾಥಮಿಕ 3 ಮುಗಿದ ತಕ್ಷಣ ಸ್ಥಗಿತಗೊಳ್ಳದೆ ಪ್ರಾಥಮಿಕ4 ಅಥವಾ ಸಾಕ್ಷರೋತ್ತರ ಪಠ್ಯ1 ನ್ನು ಆರಂಭಿಸಲು ಸಹಾಯವಾಗುವಂತೆ ಅದಕ್ಕಾಗಿ ತರಬೇತಿಯನ್ನು ಮೂರನೇ ಪ್ರಾಥಮಿಕದ ತರಬೇತಿಯ ಜೊತೆಯೇ ಪೂರ್ಣಗೊಳಿಸಬೇಕು.

ರಾಮಾನುಜಂ : ಒಳ್ಳೆಯದು ಅದನ್ನೇ ನಾನು ಹೇಳುತ್ತಿರುವುದು ಕಾರ್ಯಕ್ಷೇತ್ರದಲ್ಲಿ ಇದನ್ನು ಪ್ರಯತ್ನಿಸಿ ಅದು ಕಾರ್ಯರೂಪಕ್ಕೆ ಬರುತ್ತದೆಯೋ ಎಂಬುದನ್ನು ಗಮನಿಸಬೇಕು. ನಮಗಿರುವ ಒಂದು ಸಮಾಧಾನವೆಂದರೆ ಪ್ರಸ್ತುತ ಜಾರಿಯಲ್ಲಿರುವ ಯಾವ ಮಾದರಿಯೂ ಪರಿಣಾಮಕಾರಿಯಾಗಿಲ್ಲ.

ವೆಂಕಟೇಶ್ : ನನಗಂತೂ ಅನುಮಾನವಿದೆ. ಇಷ್ಟೊಂದು ದೀರ್ಘಕಾಲ ಏಕೆ ಕಾಯಬೇಕು ? ಗ್ರಾಮಗ್ರಂಥಾಲಯಗಳು, ಗ್ರಾಮಸುದ್ದಿಪತ್ರಿಕೆ ಗಳು, ಸಾಕ್ಷರಗೋಡೆಗಳು, ಸಾಕ್ಷರ ಸಮೂಹದ ಗುಂಪು ಚಟುವಟಿಕೆಗಳು ಹಾಗೂ ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶಗಳನ್ನೊಳಗೊಂಡ ತರಗತಿಗಳನ್ನು ಸಂಪೂರ್ಣ ಸಾಕ್ಷರತಾ ಆಂದೋಲನದೊಂದಿಗೆ ಏಕೆ ಪ್ರಾರಂಭಿಸಬಾರದು ? ನಮ್ಮ ಎಲ್ಲಾ ಸ್ವಯಂ ಬೋಧಕರೂ ಕೇವಲ ಅಕ್ಷರಸ್ಥರು ಮತ್ತು ಅವರಿಗೆ ಇಂತಹ ವಿಷಯಗಳ ಬಗ್ಗೆ ತಿಳಿದಿರುವುದಿಲ್ಲ ಮತ್ತು ಅನಕ್ಷರಸ್ಥರು ಸಾಕ್ಷರ ಸಮೂಹಗಳಿಗೆ ಬಂದು ಬಹಳಷ್ಟು ಕಲಿಯಬಹುದು. ಇದು ಉತ್ತಮ ವಾತಾವರಣದ ನಿರ್ಮಾಣದ ಚಟುವಟಿಕೆಯಾಗಬಲ್ಲುದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

17

ರಾಮಾನುಜಂ: ನಿನಗೆ ಹೃದಯವಿದೆಯೇ(ಕಲ್ಲುಮನಸ್ಸು ನಿನ್ನದು) ಒಂದು ಸುಂಪೂರ್ಣ ಸಾಕ್ಷರತಾ ಆಂದೋಲನ ಪ್ರಾರಂಭವಾದ ಬೇಕಾದಷ್ಟು ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗುತ್ತದೆ. ಕಾರ್ಯಕ್ರಮ ಮಂಜೂರಾದಂದಿನಿಂದ ಕಲಿಕೆಯ ಹಂತದವರೆಗೆ ನೀವು ನಿರಂತರವಾಗಿ ಕೆಲಸಮಾಡುತ್ತಿರ ಬೇಕಾದುದರಿಂದ ಯಾವುದೇ ಒಂದು ಅಂಶ ನಿರ್ವಹಿಸಲೇ ಅಂಟಿಕೊಂಡಿರಲು ಸಾಧ್ಯವೇ ಇಲ್ಲ. ಏನಾದರೂ ಕೆಟ್ಟದಾದರೂ ಅಥವಾ ಅಪಯಶಸ್ಸು ಕೂಡ ಸಂಘಟನಾತ್ಮಕವಾಗಿಯೇ ಆಗುತ್ತದೆ.

ವೆಂಕಟೇಶ್: ನನಗೆ ನಂಬಿಕೆಯಿಲ್ಲ, ಆದರೆ ನನ್ನದೊಂದು ಸಲಹೆ ಇದೆ. ಇವನ್ನೆಲ್ಲಾ ಸಂಪೂರ್ಣ ಸಾಕ್ಷರತಾ ಆಂದೋಲನ ಪ್ರಾರಂಭವಾಗುವ ಮೊದಲೇ ಏಕೆ ಆರಂಭಿಸಬಾರದು ? (ಸಾಕ್ಷರೋತ್ತರ ಪಠ್ಯದ ಬೋಧನೆ ಒಂದನ್ನು ಪ್ರಾರಂಭಿಸಬಾರದು) ಇದು ಸ್ವಯಂ ಸೇವಕರನ್ನು ಪ್ರೇರೇಪಿಸಲು (ಸಜ್ಜುಗೊಳಿಸಲು) ನೆರವಾಗುತ್ತದೆ. ಅದು ಒಂದು ವಾತಾವರಣ ನಿರ್ಮಾಣ ಮಾಡಿ, ಸ್ವಯಂಸೇವಾಜಾಲ ಸೃಷ್ಟಿಯಾಗುತ್ತದೆ.

ಕಲ್ಯಾಣ್: ಬರಬರುತ್ತ ಇದು ತಮಾಷೆಯಾಗುತ್ತಿದೆ. ಸಾಕ್ಷರತಾ ಆಂದೋಲನ ಬರುವ ಮೊದಲು ಸಾಕ್ಷರೋತ್ತರ ಕಾರ್ಯಕ್ರಮ ನಡೆಸಲು ಸಲಹೆ ಮಾಡುತ್ತೀಯಾ ?

ವೆಂಕಟೇಶ್: ಇದು ತಮಾಷೆಯೇ ? ಈಗ ಬಿಹಾರ ರಾಜ್ಯದಲ್ಲಿ ಒಂದು ಜಿಲ್ಲೆಯನ್ನು ಭಾರತ ಜ್ಞಾನ ವಿಜ್ಞಾನ ಸಮಿತಿ ಸಿದ್ಧಪಡಿಸುವಾಗ ಲೋಕ ಸಂಪರ್ಕ ಆಂದೋಲನದ ಮೇಲೆ (ಇದರಲ್ಲಿ 5 ಸಂವಾದ ವಿಷಯಗಳಿವೆ, ಸ್ವಾತಂತ್ರಕ್ಕಾಗಿ ಸಾಕ್ಷರತೆ, ಮಹಿಳಾ ಸಮಾನತೆ, ಎಲ್ಲಾ ಮಕ್ಕಳಿಗೂ ಮತ್ತು ಜನರಿಗೂ ಆರೋಗ್ಯ ನಮ್ಮ ಶಾಲೆಗಳು) ಹೆಚ್ಚು ಒತ್ತುಕೊಟ್ಟಿರಲಿಲ್ಲವೇ ? ಈ ಹಿಂದೆ ಎಲ್ಲಾ ವಿಜ್ಞಾನ ಚಳುವಳಿಗಳು ಅರಿವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕೇರಳ ಮತ್ತು ತಮಿಳುನಾಡಿನಲ್ಲಿ ಉತ್ತಮ ಫಲಿತಾಂಸ ಸೇಡಲಿಲ್ಲವೆ ?

ಇಂದು ಅನೇಕ ಜಿಲ್ಲೆಗಳಲ್ಲಿ ವಾತಾವರಣ ನಿರ್ಮಾಣ ಮಾಡಿದ್ದೇವೆ. ಆದರೆ ಅನಾಸಕ್ತ ಜಿಲ್ಲಾ ಆಡಳಿತ ಅಥವಾ ಅಧಿಕಾರಿಶಾಹಿಯ ಆದ್ಯತೆಗಳು, ಹೀಗೆ ಒಂದಲ್ಲ ಒಂದು ಕಾರಣದಿಂದ ನಾವಿಂದು ಸಾಕ್ಷರತಾ ಆಂದೋಲನಗಳನ್ನು ಆರಂಭಿಸಲಾಗಿಲ್ಲ. ಇನ್ನೂ ಕೆಟ್ಟದೆಂದರೆ ಅನೇಕ ಕಡೆ ಪ್ರಾಸಂಗಿಕವಾಗಿ ಬಿಜಿವಿಎಸ್ ಅನ್ನು ಹೊರಗಟ್ಟಿ ಪ್ರಾರಂಭಿಸಲಾಗಿದೆ. ಹಾಗಾದರೆ ನಾವೇನು ಮಾಡಬೇಕು. ಸಂಘಟನಾ ಜಾಲವನ್ನು ಜೀವಂತವಾಗಿದ್ದು ಕೊಳ್ಳುವುದು ಹೇಗೆ ? ನಾನು ಹೇಳುವುದಿಷ್ಟೆ, ನಾವೆಲ್ಲಾ ಸಾಕ್ಷರೋತ್ತರ ಆಂದೋಲನದಲ್ಲಿ ಕೆಲಸ ಮಾಡೋಣ, ಗ್ರಾಮಗ್ರಂಥಾಲಯ, ಅಕ್ಷರ ಗೋಡೆಗಳು, ಭಿತ್ತಿಚಿತ್ರ, ಸಾಕ್ಷರ ವೃತ್ತಗಳು, ಕ್ರಿಯಾತ್ಮಕತೆ ಮತ್ತು ಅರಿವಿನ ಅಂಶಗಳನ್ನು ಬೋಧಿಸುವ

ತರಗತಿಗಳು, ಗ್ರಾಮ ಸಂಸತ್, ಅಧ್ಯಯನ ಪ್ರವಾಸ, ಮುಂತಾದವುಗಳನ್ನು ನಾವು ಆರಂಭಿಸೋಣ. ಒಂದು ಪಕ್ಷ ಯೋಜನೆ ಮಂಜೂರಾತಿ ಪಡೆದರೆ ನಂತರ ಸಾಕ್ಷರತಾ ಕೆಲಸವನ್ನೂ ಸಹ ಕೈಗೆತ್ತಿಕೊಳ್ಳೋಣ.

ರಾಮಾನುಜಂ :ನಿನ್ನ ಪದ ಬಳಕೆಯಿಂದ್ದ ಭಾರಿ ಗೊಂದಲವನ್ನುಂಟು ಮಾಡಿದೆಯೆಂದೇ ನನ್ನ ಭಾವನೆ. ಆದರೆ ನಾನು ಅವರ ಹಿಂದಿರುವ ಉದ್ದೇಶವನ್ನು (ಚೈತನ್ಯ) ಮಾತ್ರ ಬಹುಶಃ ನೀನು ನಿರಂತರ ಶಿಕ್ಷಣ ಎಂಬ ಪದ ಬಳಸಿದರೆ ಗೊಂದಲ ಕಡಿಮೆಯಾಗುತ್ತದೆ. ''ಸಾಕ್ಷರತಾ ಕೌಶಲ ಗಳಿಸುವುದು, ವರ್ಣಮಯ ನಿರಂತರ ಶಿಕ್ಷಣದ ಮುಖ್ಯಸಂಗತಿ.'' ಬಹುಶಃ ಯಾವ ಜಿಲ್ಲೆಗಳು ಸಾಕ್ಷರತಾ ಆಂದೋಲನದ ಹೊಸ್ತಿಲಲ್ಲಿವೆಯೋ, ಅಲ್ಲಿ ಸಾಕ್ಷರತಾ ಆಂದೋಲನವನ್ನು ಕೈಗೆತ್ತಿಕೊಳ್ಳುವ ಮುನ್ನ ಇಂತಹ ಪ್ರೋತ್ಸಾಹಕ ಕೆಲಸವನ್ನು ಮಾಡಿಮುಗಿಸಬೇಕಾಗಿದೆ. ಹಾಗಾದರೆ ''ಸಾಕ್ಷರತೆಗೆ ಮುನ್ನ ಸಾಕ್ಷರೋತ್ತರ, ಸಾಕ್ಷರತೆಯ ಜೊತೆ ಸಾಕ್ಷರೋತ್ತರ, ಮತ್ತು ಸಾಕ್ಷರತೆಯ ನಂತರ ಸಾಕ್ಷರೋತ್ತರ-'' ಇದು ಬಿಜಿವಿಎಸ್‌ನ ಹೊಸ ಘೋಷಣೆಯಲ್ಲವೆ ?

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಕಲ್ಯಾಣ್: ಈಗಲೂ ನನಗೆ ಇದು ತಮಾಷೆಯಾಗಿಯೇ ಕಾಣುತ್ತದೆ. ಮತ್ತೆ ಇಂತಹ ದಡ್ಡತನದ ಕೆಲಸಗಳಿಗೆ ಯಾರೂ ಹಣವನ್ನು ಕೊಡಲಿಚ್ಛಿಸುವುದಿಲ್ಲ ಎಂದು ನನ್ನ ನಂಬಿಕೆ.

ವೆಂಕಟೇಶ್: ಇರಲಿ ಬಿಡು, ಪರವಾಗಿಲ್ಲ ಆದರೆ ಸಾಕ್ಷರೋತ್ತರ ಆರಂಭವಾಗಿ ಕಾರ್ಯಕ್ರಮಗಳು ನಿರಂತರವಾಗಿ ನಡೆಯತೊಡಗಿದರೆ ಸಾಕ್ಷರೋತ್ತರ ಕಾರ್ಯಕ್ರಮ ಯಾವಾಗ ಪ್ರಾರಂಭವಾಗುತ್ತದೆ ಎಂಬುದು ನಿನಗೇ ತಿಳಿಯುತ್ತದೆ.





## ಚರ್ಚೆ 4 ಈ ಆಂದೋಲನಗಳು ಸ್ಥಿರವಾಗಿ ಉಳಿಯುಬಲ್ಲವೆ ?

ಚೌಧರಿ : ಸ್ವಯಂಸೇವಕರು ಸಾಕ್ಷರೋತ್ತರ ಕಾರ್ಯಕ್ರಮದಲ್ಲೂ ಸ್ವಯಂಸೇವೆಯನ್ನು ಮುಂದುವರಿಸುತ್ತಾರೆಂದು ನಿರೀಕ್ಷಿಸುವುದು ಕೇವಲ ಭ್ರಮೆ ಎನಿಸುತ್ತದೆ. ಅವರಾಗಲೇ ಸಾಕ್ಷರತಾ ಆಂದೋಲನದಲ್ಲಿಯೇ ತುಂಬಾ ಯೋಗ್ಯವಾದ, ಅಗಾಧವಾದ ಸೇವೆ ಸಲ್ಲಿಸಿದ್ದಾರೆ, ಮುಂದೆಯೂ ಇದನ್ನು ನಿರೀಕ್ಷಿಸುವುದು ಭ್ರಮೆ ಎನಿಸುತ್ತದೆ.

ಶರ್ಮ : ಬಹುಶಃ ನಾವೀಗ ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ಭಾಗವಹಿಸುವ ಸ್ವಯಂಸೇವಕನಿಗೆ ಗೌರವಧನ ನೀಡುವುದರ ಬಗ್ಗೆ ಯೋಚಿಸಬಹುದು. ಈ ಕಾರ್ಯಕ್ರಮದಲ್ಲಿ ಒಳಗೊಂಡಿರುವ ಸ್ವಯಂಸೇವಕರ ಸಂಖ್ಯೆ ತುಂಬಾ ಕಡಿಮೆ ಇರುವುದರಿಂದ ಅದಕ್ಕಾಗಿ ನಾವು ಹಣ ಖರ್ಚು ಮಾಡಬಹುದು ಹಾಗಾಗಿ ಸ್ವಯಂಸೇವಕನಿಗೆ ಗೌರವಧನ ಸಂಭಾವನೆ ನೀಡದೆ ಈ ಕಾರ್ಯಕ್ರಮವನ್ನು ಮುಂದುವರಿಸಿಕೊಂಡು ಹೋಗುವುದು ಸಾಧ್ಯವೇ ಇಲ್ಲ.

ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯುಗಳು

*19*

ಪರಮೇಶ್ವರನ್: ಯಾವುದೇ ಗೌರವಧನ ನೀಡುವುದನ್ನು ಆರಂಭಿಸುವುದನ್ನು ನಾನು ವಿರೋಧಿಸುತ್ತೇನೆ. ಬಹುಮಟ್ಟಿಗೆ ಸಂಪೂರ್ಣ ಸಾಕ್ಷರತಾ ಆಂದೋಲನರ ನೇತಾರರು ಮತ್ತು ಕಾರ್ಯಕರ್ತರೂ ಕೂಡ ಇದನ್ನು ಖಡಾಖಂಡಿತವಾಗಿ ವಿರೋಧಿಸುತ್ತಾರೆ. ಗೌರವಧನ ಕೊಡಲು ಮತ್ತೆ ಪ್ರಾರಂಭಿಸಿದರೆ, ವಯಸ್ಕ ಶಿಕ್ಷಣ ಕಾರ್ಯಕ್ರಮದಲ್ಲಿ ಕೆಲಸ ಮಾಡಿದ್ದ ಪಟ್ಟಭದ್ರ ಹಿತಾಸಕ್ತಿಗಳನ್ನು ಮತ್ತೆ ಇದರಲ್ಲೂ ಎಳೆದಂತಾಗುತ್ತದೆ ಅದರರ್ಥ. ಭ್ರಷ್ಟಾಚಾರವನ್ನು ಮರಳಿ ತರುವುದು, ಇದರಿಂದಾಗಿ ಜನಾಂದೋಲನದ ಗುಣಲಕ್ಷಣಗಳು ನಾಶವಾಗಿ, ಸಮುದಾಯ ಯಾವುದೇ ರೀತಿಯ ಸಹಾಯ ಮಾಡಲಾರದು. ಇಂದಿನ ದಿನಗಳಲ್ಲಿ ಸ್ವಯಂಸೇವಕರು ಸಿಗುವುದಿಲ್ಲ ಎಂಬ ಹೇಳಿಕೆ ಕೇವಲ ಊಹೆಯ (ಪೂರ್ವಾಗ್ರಹ ಪೀಡಿತ) ಮಾತಾಗುತ್ತದೆ. ಅದಕ್ಕೆ ಯಾವ ಸಾಕ್ಷ್ಯಾಧಾರ ಇಲ್ಲ ನನ್ನ ಊಹೆಯಂತೆ ಅವರು. . ಖಂಡಿತಾ ಸಿಗುತ್ತಾರೆ. ನಾವು ಹುಡುಕಿನೋಡಬೇಕಷ್ಟೆ.

ಪ್ರೇಮ್ : ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿಯೇ ಯಾವಾಗಲೂ ಸ್ವಯಂಸೇವಕರು ಬದಲಾಗುತ್ತಿರುತ್ತಾರೆ. ಮದುವೆಯಾಗು ವುದರಿಂದ ಪರೀಕ್ಷೆಗಾಗಿ ವಲಸೆ ಹೋಗುವುದು ಮುಂತಾದ ಕಾರಣಗಳಿಂದ ಕೆಲವು ಸಾರಿ ಕಲಿಯುವವರೊಡನೆ ಮತ್ತು ಸಂಘಟಕರೊಡನೆ ಜಗಳ ಮಾಡುವುದರಿಂದ

ಸ್ವಯಂಸೇವಕರು ಬಿಟ್ಟುಹೋಗುತ್ತಾರೆ. ಕೆಲವು ಬಾರಿ ಕೇವಲ ಆಸಕ್ತಿ ಕಳೆದುಕೊಳ್ಳುವುದರಿಂದ ಬಿಡುತ್ತಾರೆ. ಆದರೆ ಒಂದು ವೇಳೆ ತುಂಬಾ ಜಾಗರೂಕನಾದ ಸಂಘಟಕ ಅಥವಾ ಸಂಘಟಕಿ ಇದ್ದರೆ ಅವರ ಜಾಗದಲ್ಲಿ ಬೇರೆಯವರನ್ನು ನೇಮಿಸುತ್ತಾರೆ. (ಈ ರೀತಿ ಬದಲಾವಣೆ ಮಾಡುವಾಗ ಸಾಮಾನ್ಯವಾಗಿ ತರಬೇತಿ ಹೊಂದದ ಸ್ವಯಂಸೇವಕರೇ ದೊರಕುತ್ತಾರೆ ಆದರೆ ಅದು ಬೇರೆ ವಿಚಾರ)

ಸಾಕ್ಷರೋತ್ತರ ಕಾರ್ಯಕ್ರಮದಲ್ಲಿಯೂ ಸಹ ಸ್ವಯಂಸೇವಕರನ್ನು ಹೊಸದಾಗಿ ನೇಮಿಸಿಕೊಳ್ಳಬೇಕಾಗುತ್ತದೆ. ಮತ್ತೆ ಪ್ರತಿವರ್ಷ 10ನೇ ತರಗತಿ ವಿದ್ಯಾರ್ಥಿಗಳ ಹೊಸ ತಂಡಗಳೇ ಬರುತ್ತಿರುತ್ತವೆ ಮತ್ತು ಅವರನ್ನು ಈ ಕಾರ್ಯಕ್ರಮದಲ್ಲಿ ಬಳಸಿಕೊಳ್ಳಲಾಗುತ್ತದೆ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ನಮಗೆ ತಿಳಿದಿರುವಂತೆ ಸ್ವಯಂಸೇವಕರು ಬಿಟ್ಟುಹೋಗುವುದು, ಸ್ವಯಂಸೇವಕರ ಗುಣಮಟ್ಟ ಮತ್ತು ಸಹಕಾರ, ವಾತಾವರಣ, ನಿರ್ಮಾಣದ ಚಟುವಟಿಕೆಗೆ ವಿಲೋಮ ಅನುಪಾತದಲ್ಲಿರುತ್ತದೆ (ಕೇಂದ್ರಭೇಟಿ, ಸ್ವಯಂಸೇವಕರ ಸಭೆ, ಗ್ರಾಮಸಮಿತಿ ಮುಂತಾದವು) ಈ ಎರಡೂ ಖಡಾಖಂಡಿತವಾಗಿ ಸ್ಥಳೀಯ ಸಂಘಟಕರ ಕಾರ್ಯನಿರ್ವಹಣಾ ಮಿತಿಯನ್ನು ಅವಲಂಬಿಸಿರುತ್ತದೆ.

ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ನಮಗೆ ತಿಳಿದಿರುವಂತೆ ಕಡಿಮೆ ಸಂಖ್ಯೆಯ ಸ್ವಯಂಸೇವಕರು ಬೇಕೆಂಬುದು ನಿಜ. ಆದರೆ ಈಗ ನಮಗೆ ಸ್ವಯಂಸೇವಕರ ಕಾರ್ಯನಿರ್ವಹಿಸಲು ಅನೇಕ ನವಸಾಕ್ಷರರು ದೊರೆಯುತ್ತಾರೆ. ನನಗನ್ನಿಸುವಂತೆ ಇಲ್ಲಿ ಮಿತಿಗೊಳಿಸುವ ಅಂಶ ಸ್ವಯಂಸೇವಕರಿಗೆ ಪ್ರೇರಣೆಯಲ್ಲ, ಆದರೆ ಸ್ಥಳೀಯ ಸಂಘಟಕರು ತಮ್ಮ ಆಸಕ್ತಿಯನ್ನು ಮತ್ತು ಕಾರ್ಯತತ್ಪರತೆಯ ಸಾಮರ್ಥ್ಯವನ್ನು ಉಳಿಸಿಕೊಳ್ಳ ಬೇಕಾಗಿರುವುದು. ಒಬ್ಬ ಪ್ರಾಮಾಣಿಕ ಸಂಘಟಕನ ಮೇಲೆ ಎಷ್ಟೊಂದು ಕಾರ್ಯಭಾರ ಬೀಳುತ್ತದೆಯೆಂದರೆ ಆತ ನಾವು ಕರೆಯುವ ''ಸಂಘನ ದಣಿವು'' ಎಂಬ ಸಿದ್ಧಾಂತಕ್ಕೆ ಬಲಿಯಾಗಿ ಬಿಡುತ್ತಾರೆ. ಸಮಸ್ಯೆ ಕೇವಲ ಪ್ರೇರಣೆ ಮಾತ್ರವಲ್ಲ ಎಂದು ಈ ಪದ ಸೂಚಿಸುತ್ತದೆ.



ಸೆಲ್ವಂ : ಸ್ವಯಂಸೇವಕನ ಸ್ಥಾನದ ಬಗ್ಗೆ ನಿನ್ನ ನಿರ್ಧಾರ ನನಗೆ ಸರಿ ಎನ್ನಿಸುವುದಿಲ್ಲ ಆದರೆ ಪ್ರೇಂನ ವಾದದಂತೆ ಸಮಸ್ಯೆ ಕೇವಲ ಸ್ವಯಂಸೇವಕನ ಹಂತದಿಂದ ಸಂಘಟನೆಯ ಹಂತಕ್ಕೆ ಮತ್ತು ಸ್ವಯಂಸೇವಕನ ಪ್ರೇರಣೆಯಿಂದ ಸಂಘಟಕನ ದಣಿವಿನವರೆಗೆ ಬದಲಾಗಿದೆಯಷ್ಟೆ. ಆದರೆ ಅದರ ಪರಿಣಾಮ ಒಂದೇ, ಒಂದು ಕಾರ್ಯಕ್ರಮ ಕಡೆಯವರೆಗೆ ದೃಢವಾಗಿ ನಿಲ್ಲದು.

ಶರ್ಮ: ಸ್ವಯಂಸೇವಕರಿಗೆ ಗೌರವಧನ ಕೊಡದಿದ್ದರೆ ಸಾಧ್ಯವಾಗುವುದಿಲ್ಲ ಎಂದಿಟ್ಟುಕೋ, ಬಹುಶಃ 400-500 ಜನ ನವಸಾಕ್ಷರರಿಗೆ ಒಬ್ಬ

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯುಗಳು

ಸಂಘಟಕನಿಗೆ ಗೌರವಧನ ನೀಡಬೇಕಾಗುತ್ತದೆ. ಅನೇಕ ಸಾಕ್ಷರೋತ್ತರ ಕಾರ್ಯಕ್ರಮಗಳು ಈ ರೀತಿ ಗೌರವಧನ ಕೊಡುವುದನ್ನು ಅನುಮೋದಿಸಿದೆಯಾದರೂ ಅದನ್ನು ಎಚ್ಚರಿಕೆಯಿಂದ ಪ್ರಯಾಣ ಭತ್ಯ ಮತ್ತು ಸ್ಥಳೀಯ ಖರ್ಚುಗಳು ಮುಂತಾದವುಗಳ ಮೂಲಕ ಅಗೋಚರ ವಾಗಿಡಲಾಗಿದೆ. ಒಂದು ಅರ್ಥದಲ್ಲಿ ಹೇಳಬೇಕಾದರೆ ಜನಶಿಕ್ಷಣ ನಿಲಯಗಳೇ ಪುನರ್ಜನ್ಮ ಪಡೆದು ಬಂದಂತೆ.

ಪರಮೇಶ್ವರನ್: ಈ ಹಂತದಲ್ಲಿ ಯಾವುದೇ ಗೌರವಧನ ಕೊಡಲು ಪ್ರಾರಂಭಿಸುವುದು ಅಪಾಯಕಾರಿ ಎಂಬುದು ನನ್ನ ಅಭಿಪ್ರಾಯ. ಇದರಿಂದ ಜನ ಸಮುದಾಯದ ಬೆಂಬಲ ಸಿಗಲಾರದು. ಅಲ್ಲದೆ ಸೂಕ್ತವೇತನ ಕೊಡಿ ಎಂಬ ಬೇಡಿಕೆಯೂ ಬರಬಹುದು. ಈ ಬಗ್ಗೆ ಎಲ್ಲಾ ಖಟ್ಲೆಗಳೂ ನ್ಯಾಯಾಲಯ ಸೇರಿವೆ. ಮುಂದೆ ಈ ಕೆಲಸವನ್ನು ಖಾಯಂಗೊಳಿಸುವಂತೆ ಒತ್ತಡವೂ ಬರಬಹುದೆಂಬುದನ್ನು ಮರೆಯಬೇಡ. ಬಹಳ ಬೇಗ ಇಡೀ ಹಳ್ಳಿಯಲ್ಲಿ ಸಾಕ್ಷರೋತ್ತರ ಕಾರ್ಯಕ್ರಮ ಕೇವಲ ಪ್ರೇರಕನ ಕೆಲಸವಾಗಿ ಉಳಿಯುತ್ತದೆ. ಈ ರೀತಿಯ ದೊಂಬರಾಟ ಅಧಿಕಾರಷಾಹಿಯ ಭದ್ರಕೋಟೆಯ ಬಾಯಿಗೆ ಕಡೆಯ ಗುಟುಕು ಆಗಬಹುದು. ಈಗ ನಾವು ಬೇರೆ ಆಯ್ಕೆಯ ಬಗ್ಗೆಯೂ ನೋಡಬೇಕಾಗುತ್ತದೆ. ಸಂಘಟಕನ ದಣಿವನ್ನು ಚೆನ್ನಾಗಿ ಅರ್ಥಮಾಡಿ ಕೊಳ್ಳಬೇಕಾಗುತ್ತದೆ.

ಸೆಲ್ವಂ : ಸಾಕ್ಷರೋತ್ತರ ಕಾರ್ಯಕ್ರಮ ಸಂಘಟಿಸುವ ಸ್ಥಳೀಯ ವ್ಯಕ್ತಿಗಳಿಗೆ ಅನೇಕ ಖರ್ಚುಗಳಿರುತ್ತವೆ ಎಂಬುದನ್ನು ಮರೆಯಬೇಡ, ಅದು ಸುಮಾರು 100 ರೂಗಳಷ್ಟಾಗದಿದ್ದರೂ ಒಂದಷ್ಟು ಹಣ ಖಂಡಿತಾ ಬೇಕಾಗುತ್ತದೆ.

ಪ್ರೇಮ್: ಸರಿ ಹಾಗಾದರೆ ಈ ಹಣವನ್ನು ವೈಯಕ್ತಿಕವಾಗಿ ಒಬ್ಬ ಸಂಘಟಕನಿಗೆ ಕೊಡದಿದ್ದರೂ ಗ್ರಾಮಸಮಿತಿಗೆ ಇನ್ನೂ ಉತ್ತಮವೆಂದರೆ ಒಂದು ಸಾಕ್ಷರ ಸಮೂಹಕ್ಕೆ ಏಕೆ ಕೊಡಬಾರದು? ಅವರೇ ಅದನ್ನು ಹೇಗೆ ಖರ್ಚುಮಾಡಬೇಕೆಂದು ನಿರ್ಧರಿಸಲಿ. ಅಂದರೆ ಸ್ಥಳೀಯವಾಗಿ ಬರುವ ಖರ್ಚು ಭರಿಸಲಿ ಅಥವಾ ಪುಸ್ತಕ ಖರೀದಿಸಲಿ, ಸಂಘಟಕನ ಖರ್ಚನ್ನು ಪ್ರಯಾಣವೆಚ್ಚ ಮುಂತಾದವುಗಳಿಗೆ ಉಳಿಸಲಿ ಅಥವಾ ಅವನಿಗೆ ಗೌರವಧನ ಕೊಡಬೇಕೆಂದು ನಿರ್ಧರಿಸಿದರೆ ಹಾಗೆಯೇ ಮಾಡಲಿ, ಇದು ಸಮಿತಿಯನ್ನು ಕಟ್ಟಲು ಮತ್ತು ಮುಂದೆ ಈ ರೀತಿ ಹಣ ಬರದಿದ್ದರೂ ಕಾರ್ಯಕ್ರಮ ಸ್ಥಿರವಾಗಿ ಉಳಿಯುವಂತೆ ಸಹಕರಿಸುತ್ತದೆ.

ಪರಮೇಶ್ವರನ್: ಪ್ರೇಂ ನ ಸಲಹೆ ಪೂರ್ತಿ ಸರಿ ಎಂದು ನನಗನ್ನಿಸುವುದಿಲ್ಲ. ಇದು ನಡೆಯುತ್ತದೆಯೇ? ಅಂತಹ ಸಮಿತಿಯನ್ನು ರಚಿಸಲು ಸಾಧ್ಯವೇ? ಬಹುಶಃ ಖರ್ಚು ನಿರ್ವಹಿಸಲು ಇದೇ ಸರಿಯಾದ ಮಾರ್ಗವೆನಿಸುತ್ತದೆ. ಆದರೆ ನಾವು ಇದನ್ನು ಬದಲಾವಣೆ ಹೊಂದುತ್ತಿರುವ ಒಂದು ರಚನೆ

ಎನ್ನವುದನ್ನು ಬಿಟ್ಟು ಸಂಘಟಕನ ದಣಿವು ಎಂಬ ಪರಿಕಲ್ಪನೆಯ ಬಗ್ಗೆ ಪರಿಶೀಲಿಸೋಣ.

ಅದು ಹೇಗೆ ಉಂಟಾಗುತ್ತದೆ? ಅದನ್ನು ತಡೆಯುವುದು ಯಾವುದು? ಸಂಘಟಕರ ಉತ್ಸಾಹವನ್ನು ನಿರಂತರವಾಗಿ ಉಳಿಸಬೇಕಾದರೆ ಅವರಿಗೆ ತಾವು ಮಹತ್ತರ ಆಶಯದ ಒಂದು ಭಾಗ ಎಂಬ ಅರಿವಿರಬೇಕು. ಸಾಮಾಜಿಕ ಬದಲಾವಣೆಯ ಅಂಗ ಎಂಬ ಅರಿವಿರಬೇಕು. ಇದಕ್ಕೆ ಸಂಪೂರ್ಣ ಸಾಕ್ಷರತಾ ಆಂದೋಲನ ಕೇವಲ ಒಂದು ಪ್ರವೇಶದ್ವಾರ ಎಂಬ ಭಾವನೆ ಬರಬೇಕು. ತಾವೊಂದು ಜಿಲ್ಲಾಧಿಕಾರಿಯವರ ಕಾರ್ಯಕ್ರಮ ಅಥವಾ ಸರ್ಕಾರಿ ಯೋಜನೆಯೊಂದನ್ನು ಕಾರ್ಯರೂಪಕ್ಕೆ ತರುತ್ತಿದ್ದೇವೆಂದುಕೊಳ್ಳದೆ ಪ್ರಕ್ರಿಯೆಯಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳಬೇಕು. ಈ ರೀತಿ ಬೇರೆ ಸಂಘಟನೆಯಲ್ಲಿ ಗುರುತಿಸಿಕೊಳ್ಳುವುದು ಸ್ಥಳೀಯ ಸಂಘಟಕನಿಗೆ ಅತ್ಯವಶ್ಯಕ. ಈ ರೀತಿ ವ್ಯಕ್ತಿತ್ವ ಪಡೆಯುವಾಗ ಬಿಜಿವಿಎಸ್ ಅಥವಾ ಬೇರೆ ಯಾವುದಾದರೂ ಸರ್ಕಾರೇತರ ಸಂಸ್ಥೆ ಅಥವಾ ಒಳ್ಳೆ ರೀತಿಯಲ್ಲಿ ಸಂಘಟಿಸಲ್ಪಟ್ಟಿರುವ ಜಿಲ್ಲಾ ಸಾಕ್ಷರತಾ ಸಮಿತಿಯಿಂದ ದೊರೆಯಲು ಸಾಧ್ಯ. ಇಂತಹ ಆಶಯಗಳಿಲ್ಲದೆ ಗೌರವಧನ ಕೊಟ್ಟರೂ ದಣಿವು ಅನಿವಾರ್ಯ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಕುಮಾರ್: ಅಲ್ಲದೆ ಸಂಘಟಕನ ದಣಿವು ಮತ್ತು ದೃಢವಾಗಿ ಉಳಿಯುವಿಕೆ ಈ ಏಕರೂಪಿ ಆಂದೋಲನದ ನಿಯಮಿತ ಕಾರ್ಯಕ್ರಮ ವಾಗಿರುತ್ತದೆ. ಆಂದೋಲನವನ್ನು ದೃಢವಾಗಿ ಉಳಿಸಲು ರಚನಾತ್ಮಕ ಗುಂಪು ಚಟುವಟಿಕೆಗಳಾದ ಗ್ರಾಮ ಸಂಸತ್, ಸಾಮಾಜಿಕ ಭೂಪಟ ತಯಾರಿಕೆ, ಅಧ್ಯಯನ ಪ್ರವಾಸ, ಸಾಂಸ್ಕೃತಿಕ ಉತ್ಸವಗಳು ಅಗತ್ಯ. ಇಂತಹ ಚಟುವಟಿಕೆಗಳ ಸಾಧ್ಯತೆಗಳಿಗೆ ಕೊನೆಯೇ ಇಲ್ಲ.

ಪ್ರೇಮ್: ಸಾಕ್ಷರತೆ ಮಾತ್ರ ಎಂಬ ಮೂಲಾಧಾರದ ಫಲವೇ ಆಂದೋಲನದ ಏಕತಾನತೆ ಸಾಕ್ಷರತಾ ಕೌಶಲಗಳನ್ನು ಉಳಿಸಿ ಬೆಳೆಸಿ, ಅವುಗಳನ್ನು ಗ್ರಂಥಾಲಯ ಚಳುವಳಿ, ಸಾಂಸ್ಕೃತಿಕ ಚಳುವಳಿ, ಸಮಾನತಾ ಚಳುವಳಿ ಮುಂತಾದ ಚಟುವಟಿಕೆಗಳಿಗೆ ಸಂಯೋಜಿಸುವುದೇ ಈ ಕಾರ್ಯಕ್ರಮದ ಮುಂದಿರುವ ಸವಾಲು. ಇದಲ್ಲದೆ ಒಬ್ಬ ಬದ್ಧತೆ ಇರುವ ಸ್ವಯಂಸೇವಕನಿಗೆ ನಿಜವಾದ ಪ್ರಗತಿಯಾಗುತ್ತಿದೆ ಎಂಬ ಭಾವನೆ ಬೆಳೆಯಬೇಕೆ ವಿನಃ ಇದು ಹಿಂದಿನ ಆಂದೋಲನದ ಪುನರಾವರ್ತನೆ ಎನಿಸಬಾರದು. ಖಡ್ಡಾಯವಾಗಿ ಆಂದೋಲನದಲ್ಲಿ ಹೊಸತನವಿರಬೇಕು

ಕುಮಾರ್: ಉತ್ಸಾಹವನ್ನು ಉಳಿಸುವ ಮತ್ತೊಂದು ಅಂಶವೆಂದರೆ ಜನಗಳ ಪ್ರತಿಕ್ರಿಯೆ ಮತ್ತು ಆರಂಭಿಸುವಲ್ಲಿನ ತೀವ್ರ ಆಸಕ್ತಿ. ಸಂಪೂರ್ಣ ಸಾಕ್ಷರತಾ ಆಂದೋಲನವು, ಮೇಲಿನಿಂದ ಆರಂಭವಾಗಿ ಕೆಳಮುಖ ನಿರ್ದೇಶಿತ ಪ್ರಕ್ರಿಯೆ, ಒಂದು ವೇಳೆ ಅಂತಹ ಸ್ಥಳೀಯ ಪ್ರಾರಂಭಿಕ ಉತ್ಸಾಹ ಹೆಚ್ಚು

ಕಂಡು ಬಂದರೆ, ಒಬ್ಬ ಸಂಘಟಕನ ಉತ್ಸಾಹ ಉಳಿಸಲು ಇಷ್ಟು ಮಾತ್ರ ಸಾಕಾದೀತು.

ಪ್ರೇಮ್: ನಾನು ಮತ್ತೊಂದು ಅಂಶವನ್ನು ಸೇರಿಸಲು ಪ್ರಯತ್ನಿಸುತ್ತೇನೆ. ಆದಾಗ್ಯೂ ಅದು ಸಣ್ಣದು, ಮತ್ತು ಪರೀಕ್ಷೆಗೆ ಒಳಪಡದೆ ಇರುವುದು, ನವಸಾಕ್ಷರನನ್ನೂ ಒಬ್ಬ ಸಂಘಟಕನೆಂದು ಪರಿಗಣಿಸಬಹುದು. ನವಸಾಕ್ಷರನು ಇದುವರೆಗೆ ಫಲಾನುಭವಿಯಾಗಿರುವುದರಿಂದ ಅವನು ಕಾರ್ಯಕ್ರಮ ನೋಡುವದೃಷ್ಟಿ ಸ್ವಯಂಸೇವಕನ ದೃಷ್ಟಿಗಿಂತ ಭಿನ್ನವಾಗಿರುತ್ತದೆ. ಸ್ವಯಂಸೇವಕ ಮಾತ್ರ ಎಲ್ಲರೂ ಒಪ್ಪಿರುವಂತಹ ಸೇವೆ ಮಾಡುತ್ತಿರುವ ಯೋಗ್ಯನಾದ ಮತ್ತು ಉದಾತ್ತ ಧ್ಯೇಯವುಳ್ಳ ಶ್ರೀಮಂತ ವ್ಯಕ್ತಿ.

ಶರ್ಮ: ನಾನು ಸಂಪೂರ್ಣವಾಗಿ ಸಮ್ಮತಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ವಿಶಾಲವಾದ ದೃಷ್ಟಿಕೋನ, ರಚನಾತ್ಮಕವಾದ ಗುಂಪು ಚಟುವಟಿಕೆಗಳು,ಇತರ ಆಂದೋಲನಗಳ ಜೊತೆ ಸಂಬಂಧ ಏರ್ಪಡಿಸುವುದು, ಸ್ಥಳೀಯ ಚಟುವಟಿಕೆಗಳು ಇವನ್ನು ನವ ಸಾಕ್ಷರ ಸಂಘಟಕರು ಹೊಂದಿರುವುದು ನನ್ನ ದೃಷ್ಟಿ ಯಲ್ಲಿ ಅಸಂಭವ. ಇವುಗಳಲ್ಲಿ ಬಹಳಷ್ಟು ಕ್ಲಿಷ್ಟತೆ ಇದೆ (ಬಿಸಿಗಾಳಿ) 200 ರೂಪಾಯಿ ಗೌರವ ಧನ ಕೊಟ್ಟರೆ ಮೇಲಿನವೆಲ್ಲವೂ ಅನವಶ್ಯಕ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಪರಮೇಶ್ವರನ್: ಮೇಲಿನವುಗಳ ಬದಲು 200 ರೂ ಗೌರವಧನ ಕೊಡುವುದು, ವಿಫಲತೆಗೆ ದಾರಿಯಾಗುತ್ತದೆ ಎಂಬುದು ಸತ್ಯ. ಭಾರತದಲ್ಲಿ ನಮ್ಮ 40 ವರ್ಷಗಳ ಇಡೀ ಅನುಭವ ಇದನ್ನು ತೋರಿಸಿದೆ. ಇಲ್ಲಿ ಸಂಘಟಕನ ದಣಿವಿನ ಸಮಸ್ಯೆ ನಿವಾರಿಸಲು ಮತ್ತು ಕಾರ್ಯಕ್ರಮದ ನಿರಂತರತೆಯನ್ನುಳಿಸಲು ಹೊಸ ಆಯ್ಕೆಗಳ ಮೂಲಕ ಪ್ರಯತ್ನಿಸಬೇಕು.



ಸೆಲ್ವಂ : ಅದು ಎಲ್ಲಿಯವರೆಗೆ ? ಒಂದು ವರ್ಷ ? ಎರಡು ವರ್ಷಗಳು ? ಮೂರು ವರ್ಷಗಳು ? ಸರಿ ನಾವು ಅದನ್ನು ಎರಡು ವರ್ಷಗಳವರೆಗೆ ಉಳಿಸಿದ್ದೇವೆ ಎಂದುಕೊಳ್ಳೋಣ ? ನಂತರ ಏನು ? ಒಂದು ಸಂಸ್ಥೆಯ ಸ್ವರೂಪದ ನಿರಂತರ ಶಿಕ್ಷಣದ ಅಗತ್ಯವಿಲ್ಲವೆ ? ಮಹತ್ತರ ಆಶಯಗಳು ಮತ್ತು ಸ್ಥಳೀಯ ಅಗತ್ಯಗಳ ಬಗ್ಗೆ ಮಾತನಾಡುತ್ತಲೇ ಸದ್ಯದ ಗುರಿಯ ಬಗ್ಗೆ ದೃಷ್ಟಿಯನ್ನು ಕಳೆದುಕೊಳ್ಳುತ್ತಿಲ್ಲವೆ ? ನಾವು ಅದರ ಉತ್ತಮವಾದ ನಿರಂತರ ಶಿಕ್ಷಣ ಕೊಡುವ ಜವಾಬ್ದಾರಿಯನ್ನು ನಿರಾಕರಿಸುತ್ತಿಲ್ಲವೆ ? ನಾವು ಗ್ರಂಥಾಲಯ, ಆರೋಗ್ಯ, ಪ್ರಾಥಮಿಕ ಶಿಕ್ಷಣ ಮುಂತಾದವನ್ನು ಪರಿಗಣಿಸಿದರೆ ಇನ್ನೂ ಕೆಡುಕಲ್ಲವೆ ? ಇದೆಲ್ಲವನ್ನೂ ಸ್ವಯಂಸೇವಕರೇ ನಿರ್ವಹಿಸಿದರೆ ಸರ್ಕಾರ ಏನು ಮಾಡುತ್ತದೆ ? ಇದಕ್ಕಾಗಿ ಅವರಿಗೇನು ಕೊಡಲಾಗುತ್ತದೆ ?

ಪ್ರೇಮ್ : ನನಗನ್ನಿಸುವಂತೆ ನಾವು ಮುಂದಿನ ವರ್ಷ ಅಥವಾ ಎರಡೂ ವರ್ಷಗಳವರೆಗೆ ಕಾದು ನೋಡಬೇಕು. ಆದರೆ ಸದ್ಯಕ್ಕೆ ಇದರಾಚೆಗೆ ನೋಡಲು ಸಾಧ್ಯವಾಗದು. ಬಹುಶಃ ನಾವು ಅದರ ಜೊತೆಯಲ್ಲಿಯೇ ಮುಂದುವರಿದರೆ ಅದು ಸ್ಪಷ್ಟವಾಗಬಹುದು. ಆದರೆ ಈ ನಿರಂತರ ಶಿಕ್ಷಣವನ್ನು ಒಂದು

ಶೈಕ್ಷಣಿಕ ಸಂಸ್ಥೆಯ ಸ್ವರೂಪದಲ್ಲಿ ನಡೆಸಲೇಬೇಕು. ಅಂತಹ ಕ್ರಮಗಳನ್ನು ಅನುಸರಿಸಿದ ದಾಖಲೆ ಎಷ್ಟೊಂದು ನಿರಾಶಾದಾಯಕವಾಗಿವೆಯೆಂದರೆ ಅದರತ್ತ ಪ್ರಯತ್ನ ಮಾಡಲು ಯಾರಾದರೂ ಹಿಂಜರಿಯುತ್ತಾರೆ.

ಶರ್ಮ : ನನಗೆ ಗೊತ್ತು, ನಿನಗೆ ದೀರ್ಘಾವಧಿಯ ಪರಿಹಾರ ಸಿಗಲಿಲ್ಲ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಅದಕ್ಕೆ ನಾನು 200 ರೂ ಗೌರವಧನದ ಬಗ್ಗೆ ಒತ್ತಾಯಿಸುತ್ತಿರುವುದು ಇದು ಮಾತ್ರ ಆ ಕಾರ್ಯಕ್ರಮವನ್ನು ಉಳಿಸಲು ಸಾಧ್ಯ.

ಪರಮೇಶ್ವರನ್: ಪ್ರತಿಯೊಂದು ಉತ್ತರಕ್ಕೂ ನೀನು ಇದರ ನಂತರ ಏನು ? ಏನು ? ಎಂದು ಕೇಳುತ್ತಲೇ ಇರುತ್ತೀಯ. ಕೆಲವು ಹಂತದಲ್ಲಿ ನಾವೂ ಕೂಡ ನಮಗೂ ಏನೂ ಗೊತ್ತಿಲ್ಲ ಎಂದು ಹೇಳಲೇಬೇಕಾಗುತ್ತದೆ ಅಂತಹ ಸಂದರ್ಭದಲ್ಲಿ ನೀನು ಕುಣಿದು ಹೇಳುತ್ತೀಯ ''ನಾನು ಹಾಗೆ ಹೇಳಿರಲಿಲ್ಲವಾ ?'' ಹೀಗೆ ನಮ್ಮ ಅನುಮೋದನೆಯನ್ನು (ಸದ್ಯದ ಪ್ರಸ್ತಾವನೆಗಳನ್ನು) ವಿರೋಧಿಸುತ್ತೀಯ ಇದರ ಕಡೆ ಸಕಾರಾತ್ಮಕವಾಗಿ ನೋಡುವುದು ಮೂರ್ಖತನ ಎನಿಸುತ್ತದೆ. ನಿರಂತರವಾಗಿ ಉಳಿಸುವುದು ದೊಡ್ಡ ಚಾರಿತ್ರಿಕ ಚಳುವಳಿಗಳಿಗೂ ಸಮಸ್ಯೆಯಾಗಿದೆ ಮತ್ತು ಸ್ಥಿರವಾದ ಯುವಚೈತನ್ಯ ಮತ್ತು ಹೊಸತನ ಕೊಡುವುದರಿಂದಲೇ ಅದನ್ನು ಸಾಧಿಸಬಹುದು. ಇದಕ್ಕೆ ಬೇರೆ ಯಾವುದೇ ಸೂತ್ರ ಅಥವಾ ಮಾರ್ಗೋಪಾಯ ಇಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು



ಏನೇ ಆಗಲಿ, ಆಂದೋಲನವನ್ನು ತುಂಬಾ ದಿನ ನಡೆಸಿಕೊಂಡು ಹೋಗಲು ನಾನು ನನಗನ್ನಿಸಿದಂತೆ ನಿರ್ದೇಶನ ಕೊಡಲು ಪ್ರಯತ್ನಿಸುತ್ತೇನೆ. ಈ ಆಂದೋಲನ ನಿರಂತರವಾಗಿ ನಡೆಯಬೇಕು ಮತ್ತು ಅನಂತವಾಗಿರಬೇಕು.

ಪ್ರೇಂ : (ಮಧ್ಯೆ ಪ್ರವೇಶಿಸಿ) ಇದು ಒಂದು ಚೌಕವೃತ್ತವನ್ನು ಮಾಡಿದಂತಾಗುವುದಿಲ್ಲವೆ ? ವ್ಯಾಖ್ಯಾನದ ಮೂಲಕ ಮಾತ್ರ ಆಂದೋಲನ ನಿರಂತರವಾಗುಳಿಯುತ್ತದೆಯೆ ? ಈ ಪದಗಳಲ್ಲಿ ಕೆಲವು ಗೊಂದಲಗಳಿಲ್ಲರೆ ? ಆಂದೋಲನಗಳು ಬೇಗ ಬಿರಿಯುವಂತಹವುಗಳು (ಸ್ಫೋಟಗೊಳ್ಳುವಂತಹವುಗಳು) ಸ್ಥಿರವಾಗುಳಿಯುವ ಪ್ರಕ್ರಿಯೆ ಅಲ್ಲ.

ಪರಮೇಶ್ವರನ್: ನಾನು ಹೇಳಿದ್ದು ಕೂಡ ಅದೆ-ಆಂದೋಲನವನ್ನು ಸ್ಥಿರವಾಗುಳಿಸುವ ಪ್ರಕ್ರಿಯೆ. ಆದರೆ ನಾನು ಇನ್ನೂ ಮುಂದೆ ಹೋಗಿ ದೇಶದ ಆಡಳಿತವೇ ಅಂತಹ ಪ್ರಕ್ರಿಯೆಯಾಗ ಬೇಕೆನ್ನುತ್ತೇನೆ. ಇದು ಅಸಾಧ್ಯವೇನೂ ಅಲ್ಲ. ಮುಖ್ಯವಾದ ಪದಗಳಲ್ಲಿ ಹೇಳಬೇಕಾದರೆ ನಾವು ಸ್ಥಳೀಯ ಚುನಾಯಿತ ಪ್ರತಿನಿಧಿಗಳಲ್ಲಿ ಪ್ರೋತ್ಸಾಹಿಸಿ, ಅವರು ಸಕ್ರಿಯವಾಗಿ ಭಾಗವಹಿಸುವಂತೆ ಮಾಡಿ ಅವರು ಮೂಲಶಿಕ್ಷಣ ಮತ್ತು ಆರೋಗ್ಯದ ಅಗತ್ಯಗಳನ್ನು ನೋಡಿಕೊಳ್ಳಬೇಕು. ಬೇರೆ ಮಾತಿನಲ್ಲಿ ಹೇಳುವುದಾದರೆ ಪಂಚಾಯತಿಗಳು ಈ ಎಲ್ಲಾ ಕೆಲಸಗಳನ್ನು ಮುಂದುವರಿಸಿಕೊಂಡು ಹೋಗುವಂತೆ

ಮಾಡಬೇಕಾಗುತ್ತದೆ. ಅಂತಹ ಪ್ರತಿನಿಧಿಗಳು ಇನ್ನೂ ಮುಂದುವರಿದು ಸ್ಥಳೀಯ ಕ್ಷೇತ್ರಯೋಜನೆಗಳನ್ನು ರೂಪಿಸುವುದಲ್ಲದೆ ಆ ಪ್ರದೇಶದ ನಿರಂತರ ಅಭಿವೃದ್ಧಿಯನ್ನು ಸಾಧಿಸುವಂತಾಗಬೇಕು.

ಪ್ರೇಮ್: ಆದರೆ ಇಂದಿನ ಪಂಚಾಯಿತಿಗಳನ್ನು ನೋಡು ಬಹಳಷ್ಟು ನಿಷ್ಕ್ರಿಯವಾಗಿದೆ. ಅಥವಾ ಪಟ್ಟಭದ್ರ ಹಿತಾಸಕ್ತಿಗಳು ಮೇಲುಗೈ ಸಾಧಿಸಿವೆ. ಅನೇಕ ಪಂಚಾಯಿತಿಗಳು ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ವಿರೋಧಿಸಿದವು. ಅಥವಾ ಅದರಿಂದ ತುಂಬಾ ದೂರ ಉಳಿದವು. ಇವು ಸಾಕ್ಷರೋತ್ತರ ಆಂದೋಲನದ ಮುಂದುವರಿದ ಹಂತದಲ್ಲಿ ಮೇಲ್ವಿಚಾರಣೆ ಮಾಡುತ್ತದೆಂದು ನಿರೀಕ್ಷಿಸುವೆಯಾ ?ಇದು ಅಸಾಧ್ಯ ಎಂದು ತೋರುತ್ತದೆ.

ಪರಮೇಶ್ವರನ್:ಒಂದೆರಡು ರಾಜ್ಯಗಳಲ್ಲಿ ಬಿಟ್ಟರೆ ಬೇರೆ ಕಡೆಯ ಪಂಚಾಯಿತಿಗಳ ಬಗ್ಗೆ ಮಾತನಾಡುತ್ತಿಲ್ಲ. ಪಂಚಾಯಿತಿಗಳ ಪರಿವರ್ತನೆ ಮತ್ತು ಅವುಗಳ ಕಾರ್ಯವೈಖರಿಯ ಬಗ್ಗೆ ಮಾತಾಡಬೇಕಾಗಿದೆ. ಎಲ್ಲಿ ಪ್ರತಿಯೊಬ್ಬರೂ ಸಾಕ್ಷರರಾಗಿದ್ದಾರೋ, ಎಲ್ಲಿ ಜನರು ಹೆಚ್ಚು ಸಂಘಟಿತರಾಗಿದ್ದಾರೋ, ಎಲ್ಲಿ ಮಹಿಳೆಯರ ಧ್ವನಿ ಕೇಳುತ್ತಿದೆಯೋ, ಎಲ್ಲ ದುರ್ಬಲ ವರ್ಗದವರು ಶಿಕ್ಷಣ ಪಡೆದು ತಮ್ಮ ಹಕ್ಕುಗಳ ಬಗ್ಗೆ ಪ್ರಜ್ಞಾವಂತರಾಗಿದ್ದಾರೋ ಮತ್ತು ಅಭಿವೃದ್ಧಿಯ ಅವಕಾಶಗಳನ್ನು ಪಡೆದಿದ್ದಾರೋ ಅಂತಹ ಪಂಚಾಯಿತಿಗಳ ಬಗ್ಗೆ ಮಾತನಾಡುತ್ತೇವೆ. ಬುಡಮಟ್ಟದ ಅರ್ಥಪೂರ್ಣ ಪ್ರಜಾಪ್ರಭುತ್ವದ ಬಗ್ಗೆ ಮಾತನಾಡುತ್ತೇನೆ. ಅಂತಹುದು ''ಗ್ರಾಮಸ್ವರಾಜ್ಯ'' ಅಥವಾ ''ಪಂಚಾಯತ್ ರಾಜ್ಯ'' ಅಥವಾ ''ಶ್ರೀಸಾಮಾನ್ಯನಿಗೆ ಅಧಿಕಾರ'' ಯಾವ ಹೆಸರಿನಿಂದಲಾದರೂ ಕರೆಯಬಹುದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಯಾರೂ ಕೂಡ ಎಲ್ಲರನ್ನೂ ಸಾಕ್ಷರರನ್ನಾಗಿ ಮಾಡುತ್ತೇವೆ ಎಲ್ಲರೂ ಶಾಲೆ ಸೇರುವಂತೆ ಮಾಡುತ್ತೇವೆ, ಮಹಿಳೆಯರಿಗೆ ಸಮಾನತೆ ಕೊಡಿಸುತ್ತೇವೆ, ಮೂಲಭೂತ ಆರೋಗ್ಯ ಸೌಲಭ್ಯ ಕೊಡುತ್ತೇವೆ ಎಂದು ಹೇಳಿಕೊಳ್ಳಲಾಗದು. ಆದರೆ ಸ್ಥಳೀಯ ಸಂಸ್ಥೆಗಳು ಮೊದಲಿದ್ದ ಹಾಗೆಯೇ ಇರುತ್ತವೆ. ಆದರೆ ಬೇರೆ ರೀತಿಯಲ್ಲಿ ಹೇಳುವುದಾದರೆ ಆಂದೋಲನದಂತಹ ಪ್ರಕ್ರಿಯೆ ಪಂಚಾಯತಿಯನ್ನೇ ಬದಲಾಯಿಸಬಹುದು. ಆಂದೋಲನ ಗಳು ಈ ಬದಲಾವಣೆಗೆ ರೂಪಿತವಾದಂತಹವುಗಳು.

ನಾವು ಮೂಲತಃ ಶೈಕ್ಷಣಿಕ ಸಾಂಸ್ಕೃತಿಕ ಅಭಿವೃದ್ಧಿ ಕೆಲಸಗಳ ಮೂಲಕ, ಕೆಲವು ವೇಳೆ ಚಳುವಳಿಗಳ ಮೂಲಕ ಜನರು ಅರಿವು, ಕೌಶಲ, ಸಂಘಟನೆ, ಆತ್ಮವಿಶ್ವಾಸ ಮತ್ತು ಆಶಾವಾದವನ್ನು ಪಡೆದು ತನ್ಮೂಲಕ ತಮ್ಮನ್ನು ತಾವೇ ಆಳಿಕೊಳ್ಳುವಂತಾಗಿ ಹೊಸ ಪ್ರಪಂಚದ ಸೃಷ್ಟಿಯ ಬಗ್ಗೆ ಮಾತನಾಡುತ್ತೇವೆ. ಸಾಕ್ಷರತೆ ಈ ಪ್ರಪಂಚ ಸೃಷ್ಟಿಯ ಮೊದಲ ಮೆಟ್ಟಿಲು ಮಾತ್ರ. ಆದರೆ ಇದೊಂದೇ ಸಾಧ್ಯಮಾಡುವ ಮೆಟ್ಟಿಲೇನೂ ಅಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಶರ್ಮ : ಇದು ತುಂಬಾ ದೀರ್ಘ ಪ್ರಕ್ರಿಯೆ ಕನಸಿನಂತಿದೆ

ಪರಮೇಶ್ವರನ್‌ಹೌದು ನಾವು ಕನಸನ್ನೂ ಕಾಣಬೇಕಾಗುತ್ತದೆ.

ಪ್ರೇಮ್: ಆದರೆ ಮೊದಲು, ಮೊದಲ ಹೆಜ್ಜೆ ನಂತರ ಮುಂದಿನದು, ಮೊದಲು ಸಂಪೂರ್ಣ ಸಾಕ್ಷರತಾ ಆಂದೋಲನ, ನಂತರ 2 ವರ್ಷದ ನಿರಂತರ ಶಿಕ್ಷಣದ ಹಂತ ಅಥವಾ ನಾವು ಕರೆಯುವ ಸಾಕ್ಷರೋತ್ತರ ಕಾರ್ಯಕ್ರಮ ನಂತರ ಏನಾಗುತ್ತದೋ ನೋಡೋಣ.

ಸೆಲ್ವಂ : ನಾನು ಅರ್ಥಮಾಡಿಕೊಂಡಂತೆ ಬೇರೆ ಬೇರೆ ಸ್ಥಿತಿಗಳನ್ನು ಹೇಳುತ್ತೇನೆ. ಶರ್ಮರ ಅಭಿಪ್ರಾಯದಂತೆ ಗೌರವಧನ ನೀಡಬೇಕು. ಪ್ರೇಂ ಹೇಳುವಂತೆ ಒಬ್ಬ ಸ್ವಯಂಸೇವಕನಿಗೆ ಗೌರವಧನ ಕೊಡುವ ಗೌರವಧನಕ್ಕೆ ಬದಲಾಗಿ ಸಂಘಟನಾತ್ಮಕ ವೆಚ್ಚವನ್ನು ಸ್ಥಳೀಯ ಸಮಿತಿಗಳಿಗೆ ಕೊಡುವುದು, ಇದಲ್ಲದೆ 5 ಮುಖ್ಯವಾದ ಮತ್ತು ಹೆಚ್ಚು ಸ್ಥಿರವಾಗುಳಿಯುವ ಸ್ವಯಂಸೇವಾ ಕಾರ್ಯಕ್ರಮಗಳು ಚರ್ಚೆಯಲ್ಲಿ ಗುರುತಿಸಲ್ಪಟ್ಟಿವೆ. ಈ ಐದು ಯಾವುವೆಂದರೆ ಎ)ವಿಶಾಲ ದೃಷ್ಟಿಕೋನ ಮತ್ತು ಜನಾಂದೋಲನ ಅಥವಾ ಸರ್ಕಾರೇತರ ಕಾರ್ಯಕರ್ತರ ಸಂಘಟಕರಿಗೆ ವ್ಯಕ್ತಿತ್ವವನ್ನು ಗಳಿಸಿಕೊಳ್ಳುವುದು ಬಿ) ರಚನಾತ್ಮಕ ಗುಂಪು ಚಟುವಟಿಕೆಗಳು ಸಿ)ಆಂದೋಲನವನ್ನು ಬೇರೆ ಉದ್ದೇಶಗಳೊಡನೆ ಜೋಡಿಸುವುದು ಡಿ) ಸ್ಥಳೀಯ ಕಾರ್ಯ ಚಟುವಟಿಕೆಗಳಿಗೆ ವಿಪುಲ ಅವಕಾಶ ಮತ್ತು ಇ) ನವಸಾಕ್ಷರ ಸಂಘಟಕರು ಕಾರ್ಯಕ್ರಮವನ್ನು ಎರಡು ವರ್ಷಗಳ ನಂತರವೂ ನಿರಂತರವಾಗಿ ನಡೆಸುವುದರ ಬಗ್ಗೆ ಏನೂ ಸ್ಪಷ್ಟವಾದ ಉತ್ತರ ಹೇಳಲಾಗದು. ಆದರೆ ಪರಮೇಶ್ವರನ್ ರವರ ಒತ್ತಾಯದಂತೆ ಬದಲಾವಣೆಗೊಂಡ ಪಂಚಾಯಿತಿ ಮಾತ್ರ ಇದನ್ನು ನಿರ್ವಹಿಸುವಲ್ಲಿ ಮುಖ್ಯ ಪಾತ್ರವಹಿಸುತ್ತದೆ.

ಭವಿಷ್ಯದ ಅನುಭವ ಮತ್ತು ಅನುಭವವನ್ನು ಎಚ್ಚರಿಕೆಯಿಂದ ಕೂಲಂಕುಷವಾಗಿ ವಿಶ್ಲೇಷಣೆ ಮಾಡಿದಾಗ ಮಾತ್ರ ಇಂತಹ ಕಷ್ಟವಾದ ಸಮಸ್ಯೆಗಳಿಗೆ ಉತ್ತರ ಹೇಳಬಹುದು ಎಂಬುದು ಸ್ಪಷ್ಟವಾಯಿತು.

---

ಚರ್ಚೆ 5

## ಜನಶಿಕ್ಷಣ ನಿಲಯ - ಇರಬೇಕೋ ಬೇಡವೋ ?

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**

### ಪರವಾದ ವಾದ (Case)

ಎ) ಜನಶಿಕ್ಷಣ ನಿಲಯ ಮಂತ್ರಿಮಂಡಲದಿಂದ ಮಂಜೂರಾದ ಯೋಜನೆ.

ಬಿ) ಅದನ್ನು ಸರಿಯಾರಿ ಕೆಲಸ ಮಾಡಲು ತೊಡಗಿಸಿಲ್ಲ - ಪ್ರಯತ್ನವನ್ನೇ ಮಾಡದೆ ಅದನ್ನು ಚೆನ್ನಾಗಿಲ್ಲ ಎನ್ನುವುದು ಸರಿಕಾಣುವುದಿಲ್ಲ.

ಸಿ) ಯೋಜನೆಯಲ್ಲಿ ಕೆಲವು ಸುಧಾರಣೆ ಮಾಡಿಕೊಳ್ಳಬಹುದಾದಂತಹ ನ್ಯೂನತೆಗಳಿರ ಬಹುದು, ಆದರೆ ಅದನ್ನು ಸಂಪೂರ್ಣವಾಗಿ ತೆಗೆದುಹಾಕಲಾಗದು.

ಡಿ) ಒಂದು ವೇಳೆ ಸಾಕಷ್ಟು ಜನರನ್ನು ಇದರಲ್ಲಿ ತೊಡಗಿಸುವುದು ಸಮಸ್ಯೆ ಎನಿಸಿದರೆ ವಿಕೇಂದ್ರೀಕೃತ ''ಮಿನಿಜನ ಶಿಕ್ಷಣ ನಿಲಯ'' ಗಳಿಂದ ಈ ಉದ್ದೇಶ ಸಾಧಿಸಬಹುದು. ಇದು ಆಗಲೇ ಒಪ್ಪಿಗೆ ಪಡೆದಿದೆ (ಸ್ವೀಕೃತವಾಗಿದೆ)

ಇ) ಸಾಕ್ಷರೋತ್ತರ ಕಾರ್ಯಕ್ರಮಕ್ಕೆ ಸಾಂಸ್ಥಿಕ ರೂಪ ಕೊಡಬೇಕೆಂದು ಎಲ್ಲರೂ ಇಚ್ಛಿಸುತ್ತಾರೆ. ಜನಶಿಕ್ಷಣ ನಿಲಯವೇ ಅದರ ಸಾಂಸ್ಥಿಕ ರೂಪ ಮತ್ತು ಸ್ಥಿರವಾಗಿ ಮುಂದುವರಿಯುವ ರೂಪ ಕೂಡ.

ಎ) ಜನಶಿಕ್ಷಣ ನಿಲಯದಲ್ಲಿ ಪುಸ್ತಕ, ನಿಯತಕಾಲಿಕಗಳು ಮತ್ತು ಬಳಕೆಯಾಗುವ ವಸ್ತುಗಳಾದ ಸೀಮೆಎಣ್ಣೆ ಮುಂತಾದವಕ್ಕೆ ಸಾಕಷ್ಟು ಹಣ ಒದಗಿಸಲಾಗುತ್ತದೆ ಮತ್ತು ಆಂತರಿಕ ವ್ಯವಸ್ಥೆಮಾಡಲು, ಬೀರು, ಮೇಜು, ಕುರ್ಚಿ, ಸೈಕಲ್ ಮುಂತಾದವೂ ವ್ಯವಸ್ಥೆಯಾಗುತ್ತದೆ. ಅಲ್ಲಿ ಒಬ್ಬ ಪ್ರೇರಕನಿಗೆ 200ರೂ ಗೌರವಧನವನ್ನೂ ನೀಡಲಾಗುತ್ತದೆ. ಅಂದಾಜಿನ ಪ್ರಕಾರ ಹೇಳುವುದಾದರೆ 5000 ಜನಸಂಖ್ಯೆಗೆ - ಒಂದು ಜನ ಶಿಕ್ಷಣ ನಿಲಯ ಮತ್ತು ಒಬ್ಬ ಪ್ರೇರಕನಿಗೆ ಅನುಮತಿ ಇದೆ (ಅಲ್ಲಿರುವ ಅನಕ್ಷರಸ್ಥರ ಸಂಖ್ಯೆ ಗಣನೆಗೆ ತೆಗೆದುಕೊಳ್ಳದೆ) ಒಟ್ಟಾರೆ ಎಲ್ಲಾ ಕಡೆ ಚಾಲನೆಯಲ್ಲಿರುವ ಒಂದು ಜನಶಿಕ್ಷಣ ನಿಲಯಕ್ಕೆ ಒಂದು ವರ್ಷಕ್ಕೆ ರೂ 7000/- ವೆಚ್ಚ ಮತ್ತು ಮತ್ತೆ ಪ್ರಾರಂಭಿಸಲು ರೂ 7000/- ವೆಚ್ಚ.

### ವಿರೋಧವಾದ ಪರಿಸ್ಥಿತಿ (Case)

ಎ) ಇಂದು ಜ.ಶಿ.ನಿ. ಯೋಜನೆ ಯಶಸ್ವಿಯಾಗಿಲ್ಲ, ಆದನ್ನು ಚೆನ್ನಾಗಿ ನಡೆಸಲು ಒಳ್ಳೆಯ ಪ್ರಯತ್ನಗಳು ನಡೆಯದೆ ಇರಬಹುದು, ಆದರೆ ಸಾವಿರಾರು ಜ.ಶಿ.ನಿಗಳು ತೆರೆದವಷ್ಟೆ. ಆದರೆ ಹೆಚ್ಚು ಕಮ್ಮಿ ಯಾವುವೂ ಸರಿಯಾಗಿ ಕೆಲಸ ಮಾಡಲಿಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಬಿ) ಜ.ಶಿ.ನಿ ಯೋಜನೆ ಕೇವಲ ನಿರ್ದಿಷ್ಟ ವೆಚ್ಚಗಳಿಗೆ ಆಯ-ವ್ಯಯ ತಯಾರಿಸುವುದಾಗಿದೆ. ಇದರಿಂದ ಸ್ವಯಂಸೇವಕರ ತರಬೇತಿಗೆ, ಮೇಲ್ವಿಚಾರಣೆಗೆ, ಪ್ರೇರಣೆಗೆ ಮತ್ತು ವಾತಾವರಣ ನಿರ್ಮಾಣಕ್ಕೆ ಏನನ್ನೂ ಒದಗಿಸದ ಕಾರಣ ಕಾರ್ಯಕ್ರಮ ಯಶಸ್ವಿಯಾಗಿ ನಡೆಸಲಾಗುವುದಿಲ್ಲ. ಅದು ಸಾಕ್ಷರೋತ್ತರ ಕಾರ್ಯಕ್ರಮದ ಪಠ್ಯ ಅಥವಾ ಬೇರೆ ಸಾಕ್ಷರೋತ್ತರ ಕಾರ್ಯಕ್ರಮದ ಧ್ಯೇಯಗಳ ಬಗ್ಗೆ ಚರ್ಚಿಸುವುದಿಲ್ಲ. ಜ.ಶಿ.ನಿಗಾಗಿ ಪಟ್ಟಿ ಮಾಡಲ್ಪಟ್ಟ ಎಲ್ಲಾ ಕೆಲಸಗಳನ್ನು ಪ್ರೇರಕನು ಹೇಗೆ ಮಾಡುತ್ತಾನೆಂದು ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಇವನ್ನೆಲ್ಲವನ್ನೂ ಮಾಡಲು ಅವನು ಅಥವಾ ಅವನು (ಸೂಪರ್ ಮನುಷ್ಯ)ಅತಿಮಾನವರಾಗಬೇಕಷ್ಟೆ.

ಸಿ) ಜನಶಿಕ್ಷಣನಿಲಯದ ವ್ಯಾಪ್ತಿ ತುಂಬಾ ಮಿತಿಯುಳ್ಳದ್ದು. ಅದು ಕೇವಲ ಸೀಮಿತ ಸಂಖ್ಯೆಯ ಪುಸ್ತಕ ಮತ್ತು ಸಾಮಗ್ರಿಗಳನ್ನು ಒಂದು ವರ್ಗದವರಿಗೆ ಅಥವಾ ಸಾಕ್ಷರ ಸಮೂಹಕ್ಕೆ ಒದಗಿಸಬೇಕಾಗುತ್ತದೆ. ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಪುಸ್ತಕಗಳು ಸರಿಯಾಗಿ ಬಳಕೆಯಾಗುತ್ತಿವೆ ಎಂದು ಖಚಿತ ಪಡಿಸಬೇಕಾದರೆ ಪ್ರತಿಯೊಂದು ಕುಗ್ರಾಮಕ್ಕೆ ಪುಸ್ತಕಗಳು ತಲುಪಬೇಕು ಮತ್ತು ಪ್ರತಿಯೊಂದು ಕುಗ್ರಾಮದಲ್ಲಿ ಸಾಕ್ಷರೋತ್ತರ ಕಾರ್ಯಕ್ರಮ ಪ್ರಾರಂಭವಾಗಬೇಕು. ಇದನ್ನು ಈಗಿನ ಪ್ರೇರಕ ಅಥವಾ ಜನಶಿಕ್ಷಣನಿಲಯ ಮಾಡುವುದಿಲ್ಲ.

ಡಿ) 200ರೂ ಗೌರವಧನ ಪಡೆಯುವ ಪ್ರೇರಕನಿಂದ ಕಾರ್ಯಕ್ರಮದಲ್ಲಿ ಸ್ಥಿರತೆ ತರಬಹುದು ಎಂದು ಖಚಿತವಾಗಿ ಹೇಳಲಾಗದು. ಇದು ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಮಾಡದೆ ಕೇವಲ ರಾಜಕೀಯ ಪೋಷಣೆ ಅಥವಾ ಭ್ರಷ್ಟಾಚಾರವನ್ನು ಮರಳಿ ತಂದಂತಾಗುತ್ತದೆ.

ಇ) **ಅತಿ ಪ್ರಮುಖವಾದದ್ದು** : ಗ್ರಾಮಾಂತರ ಕ್ರಿಯಾತ್ಮಕ ಸಾಕ್ಷರತಾ ಕಾರ್ಯಕ್ರಮದ (RFLP) ರೀತಿಯ ಆಂದೋಲನವನ್ನು ಮುಂದುವರಿಸಲು ಬಂದ ಸಾಕ್ಷರೋತ್ತರ ಕಾರ್ಯಕ್ರಮವನ್ನು ಕಾರ್ಯರೂಪಕ್ಕೆ ತರಲು ಜಶಿನಿಗಳು ರೂಪುಗೊಂಡವು. ಇದಕ್ಕೆ ಮತ್ತು ಹೆಚ್ಚು ನವಸಾಕ್ಷರರು. ಅನೇಕ ಸ್ವಯಂಸೇವಕರು ಇರುವ, ಜನರಿಗೆ ಶಕ್ತಿ ನೀಡುವುದೇ ಪ್ರಮುಖ ಧ್ಯೇಯವಾಗುಳ್ಳ ಸಂಪೂರ್ಣ ಸಾಕ್ಷರತಾ ಆಂದೋಲನದ ಮಾರ್ಗೋಪಾಯಕ್ಕೂ ಯಾವುದೇ ಹೊಂದಾಣಿಕೆ ಇಲ್ಲ. ಸಂಪೂರ್ಣ ಸಾಕ್ಷರತಾ ಆಂದೋಲನೋತ್ತರ ಸಾಕ್ಷರೋತ್ತರ ಯೋಜನೆಯು (ಹೊಸ ರಾಷ್ಟ್ರೀಯ ಸಾಕ್ಷರತಾ ನಿಯೋಗದ ಮಾರ್ಗದರ್ಶಿ ಸೂತ್ರಗಳು, ಸತ್ಯೇನ್ ಮೊಯಿತ್ರಾ ವರದಿಯನ್ನಾದರಿಸಿದೆ, ಇವುಗಳ ಪ್ರಕಾರ)ಜಶಿನಿ ಮಾರ್ಗ, ಕೇವಲ ಸಾಕ್ಷರೋತ್ತರ ಮಾರ್ಗಗಳಿಗಿಂತ ಸರ್ವಶ್ರೇಷ್ಠವಾಗಿದೆ.

## *ಹಳೆಹೆಂಡ ಹೊಸಾ ಬಾಟಲಿಯಲ್ಲಿ ಅಥವಾ ಹೊಸಹೆಂಡ ಹಳೆ ಬಾಟಲಿಯಲ್ಲಿ!*

### ಹಳೆಹೆಂಡ ಹೊಸ ಬಾಟಲಿಯಲ್ಲಿ ?

ಯಾರೇ ಆದರೂ ಹೊಸ ಸಂಪೂರ್ಣ ಸಾಕ್ಷರತಾ ಆಂದೋಲನೋತ್ತರ ಸಾಕ್ಷರೋತ್ತರ ಕಾರ್ಯಕ್ರಮದ ಬಗ್ಗೆ ಅಧ್ಯಯನ ಮಾಡಿದರೆ ಈ ಎಲ್ಲಾ ಪ್ರಸ್ತಾವನೆಗಳು ಮತ್ತು ರಾಷ್ಟ್ರೀಯ ಸಾಕ್ಷರತಾ ಆಯೋಗದ ಮಾರ್ಗದರ್ಶಿ ಸೂತ್ರಗಳು, ವಾಚನಾಲಯ, ಗ್ರಂಥಾಲಯ ತೆರೆಯುವುದರ ಬಗ್ಗೆ ಅಥವಾ ಕನಿಷ್ಠ ಪಕ್ಷ ಪೂರಕ ಓದುವ ಸಾಮಗ್ರಿಯನ್ನು ಒದಗಿಸುವುದರ ಬಗ್ಗೆ ಹೇಳುತ್ತವೆ. ಇದು ಹಳೆ ಜಶಿನಿಯನ್ನು ಹೊಸ ಪೊಟ್ಟಣದಲ್ಲಿ ಕಟ್ಟಿದಂತೆ, ಅವರು ಹೆಚ್ಚು ಜಶಿನಿ ಒದಗಿಸಿದರೂ ಇದು ಮೊದಲ ಪ್ರಸ್ತಾವನೆಯಂತೆ ಮಿನಿ ಜಶಿನಿಗಳಿದ್ದಂತೆ.

ಹೊಸ ಸಾಕ್ಷರೋತ್ತರ ಕಾರ್ಯಕ್ರಮದ ಪ್ರಸ್ತಾವನೆ, ಗುಂಪುಚರ್ಚೆ ಗುಂಪುಚಟುವಟಿಕೆಗಳು ಮತ್ತು ಬಿಟ್ಟಿರುವ ಅನಕ್ಷರಸ್ಥರನ್ನು ಸೇರಿಸಿಕೊಳ್ಳುವುದರ ಬಗ್ಗೆ ಪ್ರಸ್ತಾಪಿಸುತ್ತವೆ. ಇದೆಲ್ಲವನ್ನೂ ಹಳೆ ಜಶಿನಿಯಲ್ಲೂ ನೋಡಬಹುದಿತ್ತು.

ನಾನು ಗಮನಿಸಿದಂತೆ ಕೆಲವೇ ಸೇರ್ಪಡೆಗಳೆಂದರೆ ಸಾಕ್ಷರೋತ್ತರ ಕಾರ್ಯಕ್ರಮದ ಸ್ವಯಂಸೇವಕರ ತರಬೇತಿ ಅವಧಿ ಮತ್ತು ಸಾಕ್ಷರೋತ್ತರ ಪಠ್ಯ. ಈ ಎರಡು ಅಂಶಗಳನ್ನು ಜಶಿನಿಯೊಂದಿಗೆ ಸೇರಿಸಿ ಸಾಕ್ಷರೋತ್ತರ ಕಾರ್ಯಕ್ರಮದ ಪ್ರಸ್ತಾವನೆ ನೀಡಬಹುದು.

### ಹೊಸ ಹೆಂಡ ಹಳೆ ಬಾಟಲಿಯಲ್ಲಿ ?

ಜಶಿನಿಗಳ ಮುಖಂಡರ ಅಭಿಪ್ರಾಯವನ್ನು ನಾನು ಒಪ್ಪುವುದಿಲ್ಲ. ಜಶಿನಿದ ಪರಿಕಲ್ಪನೆಯಲ್ಲಿ 200ರೂ ಗೌರವಧನ ಪಡೆಯುವ ಪ್ರೇರಕನೇ ಇದರ ಕೇಂದ್ರ ವ್ಯಕ್ತಿ. ಅದೂ ಹೋಗಲಿ, ನಾನು ಜಶಿನಿ ನಾಮಫಲಕವನ್ನು ಒಪ್ಪುತ್ತೇನೆ. ಹೊಸಾ ನಮೂನೆಯ ಸಾಕ್ಷರೋತ್ತರ ಕಾರ್ಯಕ್ರಮದ ಸಮೂಹಗಳನ್ನು ಜಶಿನಿಗಳೆಂದು ಕರೆಯಬಹುದು ಅಥವಾ ಸ್ಥಳೀಯ ಸಂಪನ್ಮೂಲ ಘಟಕಗಳಾದ ಸಾಕ್ಷರ ಸಮೂಹಗಳಿಗೆ ಜಶಿನಿಗಳೆಂದು ಕರೆಯ ಬಹುದು (ಗ್ರಂಥಾಲಯವಿರುವ ಮತ್ತು ಕಛೇರಿಯಂತೆ ಕೆಲಸಮಾಡುವ ಒಂದು ಕೊಠಡಿ)

ಆದರೆ ಈಗ ಕೇವಲ ಇದೊಂದೇ ಎಲ್ಲಾ ರೀತಿಯ ಚಟುವಟಿಕೆಯನ್ನು ಮತ್ತು ಕಲಿಕಾ ಮಾರ್ಗೋಪಾಯಗಳನ್ನು ಸಂಯೋಜಿಸುವ ಕೇಂದ್ರವಾಗುತ್ತದೆ. ಇದೇ ಕೇಂದ್ರಬಿಂದುವಾದರೆ ಸಾಕ್ಷರೋತ್ತರ ಕಾರ್ಯಕ್ರಮಕ್ಕೆ ಸಾಂಸ್ಥಿಕ ರೂಪ ಕೊಡುವ ಅವಕಾಶ ಕಡಿಮೆಯಾಗುತ್ತದೆ. ಸಾಕ್ಷರೋತ್ತರ ಕಾರ್ಯಕ್ರಮದ ಸಂಘಟನೆಯ ಕೇಂದ್ರಬಿಂದು ಸಾಕ್ಷರ ಸಮೂಹವಾಗಿ ಮುಂದುವರಿಯಬೇಕು. ಅದಕ್ಕೋಸ್ಕರ ಅನೇಕ ಯೋಜನೆಗಳಲ್ಲಿ ಪ್ರಜ್ಞಾಪೂರ್ವಕವಾಗಿ ಸಾಕ್ಷರ ಸಮೂಹ ಮತ್ತು ಸಂಪನ್ಮೂಲ ಘಟಕಕ್ಕೆ (ಅಂತಹ ಗುಂಪನ್ನು ಸಂಯೋಜಿಸುವ) ಬೇರೆ ಬೇರೆ ಹೆಸರು ಕೊಡಲಾಗಿದೆ ಎಂಬುದು ನನ್ನ ನಂಬಿಕೆ.

ಇಂದಿಗೂ ಒಂದು ವೇಳೆ ಕೆಲವು ಸ್ಥಳಗಳಲ್ಲಿ ಕಡೆಯ ದಿನ ಎಣಿಸುತ್ತಿರುವ ಜಶಿನಿಯದ ಉತ್ಸಾಹಿ ಪ್ರೇರಕರು ಜಶಿನಿಯನ್ನು ಕಾರ್ಯಕ್ರಮದೊಳಕ್ಕೆ ತಳ್ಳಿದರೆ ಯಾರೇ ಆಗಲಿ ಸುಲಭವಾಗಿ ಅದರ ವ್ಯಾಪ್ತಿಯನ್ನು ಅದರಸುತ್ತ ಹಮ್ಮಲಾದ ಚಟುವಟಿಕೆಯೊಡನೆ ಬದಲಾವಣೆ ಮಾಡಬಹುದು. ಹಾಗಾಗಿ ಜಶಿನಿ ತನ್ನ ಮೂಲಾರ್ಥವನ್ನು ಕಳೆದುಕೊಂಡು ಕೇವಲ ಹಳೆಬಾಟಲಿ ಅಥವಾ ಹೊಸ ಹೆಂಡಕ್ಕೆ ಹೊದಿಕೆಯಾಗಿ ಉಳಿಯುತ್ತದೆ.

## ಚರ್ಚೆ 6 ಅನೌಪಚಾರಿಕ ಶಿಕ್ಷಣ-ಒಂದು ಚರ್ಚೆ

ಈ ಕ್ಷೇತ್ರದಲ್ಲಿ ಚರ್ಚಿಸಲಾದ ಮುಖ್ಯ ವಿಷಯಗಳು ಈ ಕೆಳಕಂಡಂತೆ ಇವೆ :-

ಎ) 9 ರಿಂದ 14 ವರ್ಷ ವಯೋಮಿತಿಯ ಗುಂಪನ್ನು ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಸೇರಿಸಬಹುದೆ ?

ಬಿ) 9-14 ವಯೋಮಿತಿಯವರನ್ನು ಸೇರಿಸಬಹುದಾದರೆ ಅವರಿಗಾಗಿಯೇ ಪ್ರತ್ಯೇಕವಾದ ಕಡ್ಡಾಯ ಪ್ರಾಥಮಿಕವನ್ನು ಇಡಬೇಕೆ ?

ಸಿ) 6 ತಿಂಗಳು ಕಳೆದ ನಂತರ ಯಾವ ರೀತಿಯ ನಿರಂತರ ಶಿಕ್ಷಣವನ್ನು ಈ ವಯೋಮಿತಿಯ ಗುಂಪಿಗೆ ಕೊಡಬೇಕಾಗುತ್ತದೆ ?

ಒಂದು ವೇಳೆ ಯಾರಾದರೂ ಅನೌಪಚಾರಿಕ ಶಿಕ್ಷಣದ ಕೇಂದ್ರಗಳ ಬಗ್ಗೆ ನಿರ್ಧಾರ ತೆಗೆದುಕೊಂಡರೆ, ಅವುಗಳಿಗೆ ಹಣಕಾಸಿನ ವ್ಯವಸ್ಥೆ ಹೇಗೆ ? ಸ್ವಯಂಸೇವಕರನ್ನು ನೇಮಿಸುವುದು, ತರಬೇತಿಗೊಳಿಸುವುದು ಹೇಗೆ ಮತ್ತು ಅದು ಹೇಗೆ ಗಟ್ಟಿಯಾಗಿ ಉಳಿಯುತ್ತದೆ ? (Sustain)

ಡಿ) ಇದರಿಂದ ಮುಂದೆ ಶಾಲೆ ಬಿಡುವ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತದೆ ಮತ್ತು 6-11 ವರ್ಷ ವಯೋಮಿತಿಯ ಮಕ್ಕಳೆಲ್ಲಾ ಶಾಲೆಗೆ ನೋಂದಾಯಿಸಲ್ಪಡುತ್ತಾರೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಹೇಗೆ ?

**ಎ) ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ 9-14 ವಯೋಮಿತಿಯುವರ ಸೇರ್ಪಡೆ**

ಈ ವಿಷಯದ ಬಗ್ಗೆ ಮುಂದೆ ಇನ್ನೂ ಹೆಚ್ಚು ಚರ್ಚೆಯಾಗಬೇಕು ಎಂದು ನನಗನ್ನಿಸುವುದಿಲ್ಲ. ಮೊದಮೊದಲು ಕೆಲವು ಪರಿಣತರು 9-14 ವರ್ಷ ವಯೋಮಿತಿಯ ಮಕ್ಕಳಿಗೆ ಕೊಡಬೇಕಾದ ವಿಷಯವೇ ಬೇರೆ, ಸಾಮಗ್ರಿಗಳು ಮತ್ತು ಕಲಿಸುವ ರೀತಿಯೇ ಬೇರೆ ಮತ್ತು ಇವರಿಗೆ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಕಲಿಸಲಾಗದು ಎಂದು ಅಭಿಪ್ರಾಯಪಡುತ್ತಿದ್ದರು. ಆದರೆ ಹೆಚ್ಚಿನ ಕ್ಷೇತ್ರಾನುಭವದ ವರದಿಗಳು ಹೇಳುವಂತೆ 9-14 ವರ್ಷದ ಮಕ್ಕಳು ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳು ಕಲಿಯುವುದರಲ್ಲಿ ಹೆಚ್ಚು ಆಸಕ್ತಿ ತೋರಿಸಿದರೆ, ಅನೇಕರು ಶಿಕ್ಷಣ ಮುಂದುವರಿಸಲೂ ಬಯಸಿದರು. ಕೆಲವು ವರದಿಗಳು ಹೇಳುವಂತೆ ಅಧಿಕೃತವಾಗಿ ಈ 9-14 ರ ವಯೋಮಿತಿಯವರನ್ನು ಆಂದೋಲನದಲ್ಲಿ ಸೇರಿಸದಿದ್ದರೂ ಈ ಮಕ್ಕಳು ನೋಂದಾಯಿಸಲ್ಪಡುತ್ತಾರೆ. ಪರಿಣತರ ಅನುಮಾನವನ್ನು ಯಾವುದೇ ಕಾರ್ಯಕರ್ತ ಮತ್ತು ಕಾರ್ಯಕ್ರಮ ಸಂಯೋಜಕರು ದೃಢಪಡಿಸಿಲ್ಲ (ಸಮರ್ಥಿಸಿಲ್ಲ) ಹಾಗಿದ್ದರೂ ಪರಿಣತರು ತಮ್ಮ ಅಭಿಪ್ರಾಯಕ್ಕೆ ನೇತುಬಿದ್ದು

ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

9-14 ರ ವಯೋಮಿತಿಯವರು ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಸಮರ್ಪಕವಾಗಿ ಕಲಿಯರಾರರು ಎಂದೇ ಹೇಳುತ್ತಾರೆ.

**ಬ) 9 ರಿಂದ 14 ವರ್ಷ ವಯೋಮಿತಿಯವರಿಗೆ ಪ್ರತ್ಯೇಕ ಪ್ರಾಥಮಿಕ ?**

ನಿರ್ಧಾರ ತೆಗೆದುಕೊಳ್ಳುವ ವ್ಯಕ್ತಿಗಳ ಅಭಿಮತದಂತೆ ಕಡ್ಡಾಯವಾಗಿ ಪ್ರತ್ಯೇಕ ಪ್ರಾಥಮಿಕವಿರಬೇಕು. ಅನೇಕ ವಯಸ್ಕರ ಪ್ರಾಥಮಿಕಗಳಲ್ಲಿ ಮಕ್ಕಳಿಗೆ ಯೋಗ್ಯವಲ್ಲದ ವಿಷಯ (ಸಂದೇಶ)ಗಳಿರುವುದು ಸ್ಪಷ್ಟ. ಆದಾಗ್ಯೂ ಒಂದೆರಡು ಅಪವಾದಗಳನ್ನು ಬಿಟ್ಟರೆ ಎಲ್ಲಿಯೂ ಬೇರೆ ಪ್ರಾಥಮಿಕ ಉಪಯೋಗಿಸಲ್ಪಟ್ಟಿಲ್ಲ. ಅಸಲಿಗೆ ಅಂತಹ ಪ್ರಾಥಮಿಕ ಬಳಸಿದ ಸಂಸ್ಥೆಗಳಲ್ಲಿ ಯಶಸ್ಸು ಕಾಣದಿರುವ ಉದಾಹರಣೆಯೂ ಇದೆ.

ಆದಾಗ್ಯೂ ಅನೇಕ ಸಂಪೂರ್ಣ ಸಾಕ್ಷರತಾ ಆಂದೋಲನದ ಕಾರ್ಯಕರ್ತರು ಬೇರೆ ಪ್ರಾಥಮಿಕದ ಮೇಲೆ ವಿಶ್ವಾಸವಿರುವುದಿಲ್ಲ. ಇದಕ್ಕೆ ಅವರು ಕೊಡುವ ಕಾರಣವೆಂದರೆ ಪ್ರತ್ಯೇಕವಾದ ಸ್ವಯಂಸೇವಕರು ಮತ್ತು ಪ್ರತ್ಯೇಕ ತರಬೇತಿ ಇರಬೇಕೆಂಬುದು. ಆಂದೋಲನದ ಚಲನಶೀಲತೆ (ಜೀವಂತಿಕೆ) ಇದಕ್ಕೆ ಅವಕಾಶ ಕೊಡುವುದಿಲ್ಲ. ಯಾವ ಸ್ವಯಂ ಸೇವಕರಿಗೆ ಎಂತಹ ವಿದ್ಯಾರ್ಥಿಗಳಿರಬೇಕು ? ಈ ಸ್ವಯಂ ಸೇವಕರನ್ನು ಎರಡೂ ರೀತಿಯ ಪ್ರಾಥಮಿಕಗಳನ್ನು ಕಲಿಸಲು ತರಬೇತುಗೊಳಿಸುವುದು ಹೇಗೆ ? ಒಂದು ಕಾರ್ಯಕ್ರಮಕ್ಕೆ ತರಬೇತಿ ತುಂಬಾ ದುರ್ಬಲವಾಗಿದೆ. ಎರಡಾದರೆ ಸಂಪೂರ್ಣ ಹಾಳಾಗುತ್ತದೆ. ಒಂದು ರಾಜಿ ಮಾಡಿಕೊಳ್ಳುವುದು, ಹೇಗೆಂದರೆ ಎಲ್ಲಾ ವಯೋಮಿತಿ ಯವರಿಗೂ ಮೊದಲ ಎರಡು ಪ್ರಾಥಮಿಕಗಳು ಒಂದೇ ಆಗಿರಲಿ, ವಯಸ್ಕರ ಸಂದೇಶಗಳನ್ನು ಬೇರೆಯಾಗಿಕೊಟ್ಟು ಎಲ್ಲರಿಗೂ ಉಪಯೋಗವಾಗುವಂತಹ ಕೆಲವು ಅಭ್ಯಾಸಗಳನ್ನು ಮತ್ತು ಆಟಗಳನ್ನು ಸೇರಿಸಬಹುದು. ಮೂರನೇ ಪ್ರಾಥಮಿಕ ಮಾತ್ರ ''ವಯಸ್ಕರಿಗೆ'' ಮತ್ತು 9-14 ವರ್ಷ ವಯೋಮಿತಿಯವರಿಗೆ ಬೇರೆ ಬೇರೆಯಾಗಿಯೇ ಇರಬೇಕು.

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**



ಇದೂ ಸಾಧ್ಯವಾಗದಿದ್ದರೆ ಪ್ರಾಥಮಿಕ-1 ಎರಡು ಗುಂಪಿಗೂ ಒಂದೇ ಆಗಿದ್ದು 2 & 3 ಪ್ರತ್ಯೇಕವಾಗಿರಬಹುದು. ಹಾಗಾಗಿ ಪ್ರೇರಣಾ (Booster) ತರಬೇತಿಯಲ್ಲಿ ಪ್ರತ್ಯೇಕವಾದ ಸ್ವಯಂಸೇವಕರು ಪ್ರಾಥಮಿಕ 2 or 3ಕ್ಕೆ ಪ್ರತ್ಯೇಕವಾಗಿ ತರಬೇತಿ ಪಡೆಯುತ್ತಾರೆ. ಇದನ್ನು ಸುಲಭವಾಗಿ ನಿರ್ವಹಿಸಬಹುದು (ನಿಭಾಯಿಸಬಹುದು) ಇದಕ್ಕೆ ಎಲ್ಲರ ಅಭಿಮತವಿದೆ. ಆದರೂ ಇದನ್ನು ಅನುಸರಿಸಲಾಗುತ್ತಿಲ್ಲ ಕಾರಣ ? ಯಾರೂ ಇದುವರೆಗೆ ಅಂತಹ ಸಾಮಗ್ರಿ ತಯಾರಿಸಿಲ್ಲ.

**ಸಿ) ಮೂರು ಪ್ರಾಥಮಿಕಗಳ ನಂತರ ಏನು ?**

ವಯಸ್ಕರಿಗಾಗಿ ರಾಷ್ಟ್ರೀಯ ಸಾಕ್ಷರತಾ ಮಿಷನ್ ಒಂದು ದಾಟು(ಸೇತುವೆಯಂತಹ) ಸಂಬಂಧ ಪ್ರಾಥಮಿಕ ಮತ್ತು ಪಠ್ಯೇತರ ಕಲಿಕೆಯ ಅವಕಾಶಗಳ ಬಗ್ಗೆ ಸಲಹೆ ಮಾಡಿದೆ. ಆದರೆ 9-14 ವರ್ಷ ವಯೋಮಿತಿಯವರಿಗೆ ಏನು ?

ಸಾಮಾನ್ಯವಾದ ಅಭಿಪ್ರಾಯವೆಂದರೆ 9-14ವರ್ಷ ವಯೋಮಿತಿಯವರಿಗೆ ಕಲಿಸುವ ಗುರಿಯೆಂದರೆ ಅವರು 5 ನೇ ತರಗತಿಯ ಕಲಿಕೆಯ ಮಟ್ಟವನ್ನು ಸಾಧಿಸಬೇಕು. ಇದನ್ನು





ಪ್ರತಿ ಸಾದಿಸಿದರೂ 6 ತಿಂಗಳ 3 ಕಲಿಕಾವಧಿಗಳಲ್ಲಿ (ಕೋರ್ಸ್)ಗಳಲ್ಲಿ ಸಾಧನೆಯಾಗ ಬಹುದೆ ? ಪ್ರತಿ 6 ತಿಂಗಳಿಗೆ ಒಂದು ಸಮಗ್ರ ಪ್ರಾಥಮಿಕ ಬಳಸಲ್ಪಡುತ್ತದೆ. ಆದ್ದರಿಂದ ಸಂಪೂರ್ಣ ಸಾಕ್ಷರತಾ ಆಂದೋಲನದ ಅವಧಿಯೂ ಸೇರಿದಂತೆ ಅವರಿಗೆ ಎರಡು ವರ್ಷದ ಕೋರ್ಸ್ ನೀಡಬೇಕಾಗುತ್ತದೆ.

ಈಗ ಮುಖ್ಯವಾದ ವಿವಾದವೆಂದರೆ ಅನೌಪಚಾರಿಕ ಶಿಕ್ಷಣ ಕೇಂದ್ರದಲ್ಲಿ ಕೆಲಸ ಮಾಡುವ ಸ್ವಯಂಸೇವಕನಿಗೆ ಗೌರವಧನ ಕೊಡಬೇಕೆ ? ಒಂದು ವಾದದ ಪ್ರಕಾರ ಅನೌಪಚಾರಿಕ ಶಿಕ್ಷಣ ನೀಡುವ ಸ್ವಯಂಸೇವಕನಿಗೆ ಅಧಿಕ ತರಬೇತಿ ಮತ್ತು ಕೆಲಸದಲ್ಲಿ ಹೆಚ್ಚಿನ ನಿಷ್ಠೆ ಇರಬೇಕಾದುದರಿಂದ ಸ್ವಯಂಸೇವಕನಿಗೆ ಹಣ ನೀಡುವುದಕ್ಕಿಂತ ಬೇರೆಯೇ ಯೋಚಿಸಿದರೆ ಒಳ್ಳೆಯದು. ಆದರೂ ಅನೌಪಚಾರಿಕ ಶಿಕ್ಷಣ ಯೋಜನೆ ಇದೆ. ಮತ್ತು ಅದು ಅಂತ್ಯವಾಗಬೇಕೆಂದು ಯಾರು ಬಯಸುವುದಿಲ್ಲ. ದೊಡ್ಡ ಪ್ರಮಾಣದ ಇಂತಹ ಅನೌಪಚಾರಿಕ ಶಿಕ್ಷಣ ಯೋಜನೆಗೆ ಹಣವೂ ದೊರೆಯುತ್ತದೆ ಎಂಬ ವಿಶ್ವಾಸವೂ ಇದೆ. ಇದಲ್ಲದೆ ಅನೌಪಚಾರಿಕ ಶಿಕ್ಷಣದಲ್ಲಿ 6 ರಿಂದ 9 ವರ್ಷ ವಯೋಮಿತಿಯ ಮಕ್ಕಳು ಒಳಗೊಳ್ಳುವ ಅವಶ್ಯಕತೆಯೂ ಇದೆ.

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**

ಹೇಗಾದರೂ ಇರಲಿ, ಹೆಚ್ಚು ಸಂಪೂರ್ಣ ಸಾಕ್ಷರತಾ ಆಂದೋಲನದ ಕಾರ್ಯಕರ್ತರು ಸ್ವಯಂಸೇವಕರಿಗೆ ಹಣ ನೀಡುವುದನ್ನು ವಿರೋಧಿಸುತ್ತಾರೆ. ಮಕ್ಕಳಿಗೆ ಕಲಿಸುವ ಸ್ವಯಂಸೇವಕರು ದೊರೆಯುವುದು ಸುಲಭ. ತರಬೇತಿ ಕೊಡುವುದೂ ಸುಲಭ. ಕೇವಲ ಸಾಮಗ್ರಿ ಮಾತ್ರ ತಯಾರಿಸಬೇಕಾಗಿದೆ. ಅನೌಪಚಾರಿಕ ಶಿಕ್ಷಣದಲ್ಲಿ ಸ್ವಯಂಸೇವಕರಿಗೆ ಹಣ ನೀಡಿದರೆ, ಪಟ್ಟಭದ್ರಹಿತಾಸಕ್ತಿಗಳು ಆಂದೋಲನ ಪ್ರವೇಶಿಸಿ ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ಹಣ ಪಡೆಯುವ ಮತ್ತು ಪಡೆಯದಿರುವ ಸ್ವಯಂಸೇವಕರ ನಡುವೆ ಸಮಸ್ಯೆ ಹುಟ್ಟುಹಾಕುತ್ತಾರೆ. ಇದಲ್ಲದೆ ಇದಕ್ಕೆ ಹೆಚ್ಚು ಹಣವೂ ಖರ್ಚಾಗುವುದರಿಂದ ಅಂತಹ ಕಾರ್ಯಕ್ರಮ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದಂತಹ ಹೊಸ ಕಾರ್ಯಕ್ರಮಗಳೊಟ್ಟಿಗೆ ಮುಂದುವರಿಯಲಾರದು.



### ಡಿ) 6 ರಿಂದ 11 ವರ್ಷ ವಯೋಮಿತಿಯ ಮಗು

ಎಲ್ಲಾ ಮಕ್ಕಳೂ ಶಾಲೆಗೆ ಹೋಗುತ್ತಾರೆ, ಶಾಲೆಯಿಂದ ಹೊರಬೀಳುವುದಿಲ್ಲ ಖಚಿತಪಡಿಸಿಕೊಂಡು ಸಾಗದಿದ್ದರೆ ಇಡೀ ಸಂಪೂರ್ಣ ಸಾಕ್ಷರತಾ ಆಂದೋಲನದ ಚಟುವಟಿಕೆಗೆ ಅರ್ಥವೇ ಇರುವುದಿಲ್ಲ. ಇದನ್ನು ದೃಢಪಡಿಸಲು ಇಡೀ ಗ್ರಾಮಸಮುದಾಯವನ್ನು ಪ್ರೇರೇಪಿಸುವ ಮತ್ತು ಶಿಕ್ಷಣ ನೀಡುವ ಅವಶ್ಯಕತೆ ಇದೆ ಮತ್ತು ಇದನ್ನು ಇಡೀ ಶಾಲಾವ್ಯವಸ್ಥೆ ಮತ್ತು ಶಿಕ್ಷಕನ ಪಾತ್ರದ ಬಗ್ಗೆ ಕ್ರಮಕೈಗೊಳ್ಳಬೇಕು. ಈ ಅನೌಪಚಾರಿಕ ಶಿಕ್ಷಣ ನೀಡುವ ಕೇಂದ್ರಗಳು ಶಾಲೆ ಬಿಡುವ ಮಕ್ಕಳ ಸಂಖ್ಯೆ ಕಡಿಮೆ ಮಾಡಲು ಮತ್ತು ಬಾಲಕಾರ್ಮಿಕರಿಗೆ (ಶಾಲೆಗೆ ಹೋಗದ) ಶಿಕ್ಷಣ ನೀಡುವ ಕೇಂದ್ರಗಳಾಗಿರಬೇಕಾದುದು ಈ ಇಡೀ ಕಾರ್ಯಕ್ರಮದ ಮುಖ್ಯ ಉದ್ದೇಶ. ಅಂತಹ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಮಾರ್ಗೋಪಾಯಗಳನ್ನು ಬೇರೆಯಾಗಿಯೇ ಚರ್ಚಿಸಬೇಕಾಗುತ್ತದೆ. ಆದರೆ ಸದ್ಯಕ್ಕೆ ಅದನ್ನು ಪೂರ್ವ ಸಂಪೂರ್ಣ ಸಾಕ್ಷರತಾ

ಆಂದೋಲನ ಮತ್ತು 9-14 ವಯೋಮಿತಿಯ ನವಸಾಕ್ಷರ ಮಕ್ಕಳ ಅನೌಪಚಾರಿಕ ಶಿಕ್ಷಣದಿಂದ ಬೇರೆಯಾಗಿಯೇ ನೋಡಿದರೆ ಉತ್ತಮ.

ಆದಾಗ್ಯೂ 6 ರಿಂದ 11 ಮತ್ತು 9 ರಿಂದ 14 ರ ಸಮಸ್ಯೆಗಳನ್ನು ಅನೌಪಚಾರಿಕ ಶಿಕ್ಷಣದ ಭಾಗವಾಗಿ ನೋಡಬೇಕೆಂಬ ಒಂದು ಬಲವಾದ ಅಭಿಪ್ರಾಯವಿದೆ. ಒಂದು ಪೂರ್ವ ಸಾಕ್ಷರತಾ ಆಂದೋಲನದ ಪರಿಸ್ಥಿತಿಯಲ್ಲಿ ಇದು ಸರಿಯಲ್ಲ (ಆದರೆ ಈಗ ಯಾರು ಇಂತಹ ಸ್ಥಾನದಲ್ಲಿ ಇರುತ್ತಾರೋ ಅವರು ಮೊದಲನೇ ಹಂತದಲ್ಲಿ 9-14 ವಯೋಮಿತಿಯವರನ್ನು ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಒಳಗೊಳ್ಳಿಸಲು ಇಷ್ಟಪಡುವುದಿಲ್ಲ, ನಿಧಾನವಾಗಿ ಈ ಅಭಿಪ್ರಾಯ ಬದಲಾಗಬಹುದು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯುಗಳು



**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**



# ಚರ್ಚೆ 7 ಸಾಕ್ಷರೋತ್ತರ ಕಾರ್ಯಕ್ರಮ / ನಿರಂತರ ಶಿಕ್ಷಣ ಮತ್ತು ಅಭಿವೃದ್ಧಿಗೆ ಸಂಬಂಧ ಕಲ್ಪಿಸುವುದು

**ಪ್ಯಾನೆಲ್ ಸದಸ್ಯ -೧ ಜಿಲ್ಲಾಧಿಕಾರಿಯವರ ಯೋಜನೆ**

[N.B: ಬಿಜಿವಿಎಸ್‌ನ ಅಧಿಕ ಕಾರ್ಯಕರ್ತರು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಇದನ್ನು ಪ್ರಮುಖವೆಂದು ಪರಿಗಣಿಸಿವೆ. ಇದಕ್ಕೆ ಜಿಲ್ಲಾಧಿಕಾರಿಯವರ ಯೋಜನೆ ಎಂದು ಹೆಸರಿಸಲು ಕಾರಣ ಅವರು ಬಹುಬೇಗ ಮತ್ತು ತುಂಬಾ ಉತ್ಸಾಹದಿಂದ ಇಂತಹ ಯೋಜನೆಯನ್ನು ಒಪ್ಪುತ್ತಾರೆ]

ನನಗೆ ಸಾಕ್ಷರೋತ್ತರ ಕಾರ್ಯಕ್ರಮಗಳೊಡನೆ ಸಂಯೋಜಿಸಬೇಕೆ, ಬೇಡವೆ ಎಂಬುದರ ಬಗ್ಗೆ ಚಿಕ್ಕ ಅನುಮಾನವಿದೆ, ಸಂಪೂರ್ಣ ಸಾಕ್ಷರತಾ ಆಂದೋಲನಗಳು, ಅದ್ಭುತ ಆದಮ್ಯ ಉತ್ಸಾಹವನ್ನು ಉಂಟುಮಾಡಿವೆ: ಅವು ಅದ್ಭುತವಾದ ಮಾನವ ಸಂಪನ್ಮೂಲವನ್ನೂ, ಸ್ವಯಂಸೇವಕರು ಸ್ಥಳೀಯ ಸಂಘಟನಕಾರರು, ಸಮಿತಿಗಳ ಪಾಲ್ಗೊಳ್ಳುವಿಕೆ ಮತ್ತು ನವಸಾಕ್ಷರರ ರೂಪದಲ್ಲಿ ಸಾಕಾರಗೊಳಿಸಿವೆ. ಆದ್ದರಿಂದ ಇದು ಅನೇಕ ಸರ್ಕಾರದ ಅಭಿವೃದ್ಧಿ ಧ್ಯೇಯಗಳನ್ನು ಸಾಧಿಸಲು ಸುವರ್ಣಾವಕಾಶ.

ಸಂಪೂರ್ಣ ಸಾಕ್ಷರತಾ ಆಂದೋಲನ ಮತ್ತು ಸಾಕ್ಷರತಾ ಕಾರ್ಯಕ್ರಮದಲ್ಲಿ ಸುಲಭವಾಗಿ ಸಾಧಿಸಬಹುದಾದ ಗುರಿಗಳೆಂದರೆ ಶಾಲೆಗೆ ನೋಂದಾವಣೆ ಹೆಚ್ಚಿಸುವುದು, ರೋಗನಿರೋಧಕ ಲಸಿಕೆ ಬಳಸಿಕೊಂಡದ್ದು, ಇದರ ಜೊತೆ ಸಾಮಾಜಿಕ ಅರಣ್ಯ, ಕುಟುಂಬಯೋಜನೆ, ಆರೋಗ್ಯದ ಅರಿವು ಮುಂತಾದ ಅಭಿವೃದ್ಧಿ ಯೋಜನೆಗಳ ಬಗ್ಗೆಯೂ ಯೋಚಿಸಬೇಕಾಗುತ್ತದೆ. ಆದರೆ ಈ ಎಲ್ಲವೂ ಕಲಿಯುವವನ ಆಸಕ್ತಿಯನ್ನು ಉಳಿಸಲು ಅಥವಾ ಗರಿಷ್ಠಮಟ್ಟವನ್ನು ತಲುಪಲು ಸಾಕಾಗುವುದಿಲ್ಲ.

ಅವರಲ್ಲಿ ಕಲಿಕೆಯ ನಿರಂತರ ಪ್ರಭಾವ ಉಳಿಸಲು ಅವರ ಹಣಗಳಿಸುವ ಸಾಮರ್ಥ್ಯವನ್ನು ಹೆಚ್ಚಿಸುವಂತೆಮಾಡಬೇಕು ಇದರ ಅರ್ಥ ಮುಖ್ಯವಾಗಿ ವೃತ್ತಿಪರ ತರಬೇತಿ ಅಗತ್ಯ ಎಂಬುದು ವೈಯಕ್ತಿಕವಾಗಿ ಅಥವಾ ಸಹಕಾರ ತತ್ವದ ಮೇಲೆ ಉತ್ಪಾದನಾ ಘಟಕ ಸ್ಥಾಪಿಸಲು ನೆರವಾಗಬೇಕು.

ಅಂತಹ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕಾದ ಮುಖ್ಯಕ್ಷೇತ್ರಗಳನ್ನು ಈ ಕೆಳಕಂಡಂತೆ ಪಟ್ಟಿಮಾಡೋಣ.

ಎ) ವೃತ್ತಿಪರತರಬೇತಿ ಉದಾ. ಹೊಲಿಗೆ, ಎಲೆಕ್ಟ್ರಾನಿಕ್ಸ್, ಆಟೋಮ್ಯಾಟಿಕ್ ಮುಂತಾದವು

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯುಗಳು

ಬಿ) ಜನರಿಗೆ ಗುಡಿಕೈಗಾರಿಕೆ ಅಥವಾ ಸಣ್ಣ ಕೈಗಾರಿಕೆಗಳನ್ನು ತೆರೆಯಲು ತರಬೇತಿ ಕೊಡುವುದು ಮತ್ತು ಸ್ವಲ್ಪ ಬಂಡವಾಳ ಮತ್ತು ಉಪಕರಣಗಳನ್ನು ಒದಗಿಸುವುದು ಉದಾ. Trysem (ಟ್ರೈಸಂ ಯೋಜನೆ)

ಸಿ) ಸಹಕಾರ ಸಂಘಗಳನ್ನು ಪ್ರಾರಂಭಿಸಲು ಪ್ರೋತ್ಸಾಹಿಸಿ ಅಲ್ಲಿಯ ಸದಸ್ಯರಿಗೆ ಬಂಡವಾಳ ನೀಡುವುದರ ಜೊತೆಗೆ ಅವರನ್ನೆಲ್ಲಾ ಗುಡಿಕೈಗಾರಿಕೆ ಅಥವಾ ಆದಾಯ ತರುವ ಯೋಜನೆ ಪ್ರಾರಂಭಿಸಲು ಪ್ರೇರೇಪಿಸುವುದು.

ಉದಾ. ಡ್ವಾಕ್ರಾ ಯೋಜನೆ

ಡಿ) ಸಾಂಪ್ರದಾಯಿಕ ಶಿಲ್ಪಿಗಳಿಗೆ ಅವರ ಕೌಶಲಗಳನ್ನು ಸುಧಾರಿಸಿಕೊಂಡು ಆದಾಯ ಹೆಚ್ಚಿಸಿಕೊಳ್ಳುವಂತಹ ಅಥವಾ ದುಡಿತದ ಸುಲಭೋಪಾಯ ಮತ್ತು ಅವರ ಸುರಕ್ಷತೆಯ ಸುಧಾರಣೆ ಇತ್ಯಾದಿಗಳ ಬಗ್ಗೆ ಸಹಾಯ ಮಾಡುವುದು.

ಇ) ಶಿಲ್ಪಿಗಳು ಕೆತ್ತಿದ ಶಿಲ್ಪಗಳು ಅಥವಾ ಗುಡಿಕೈಗಾರಿಕೆಯ ಉತ್ಪಾದನೆಗಳಿಗೆ ಮಾರುಕಟ್ಟೆ ಒದಗಿಸಲು ಸಹಕರಿಸುವುದು.

ಇಂತಹ ವಾಣಿಜ್ಯ ಚಟುವಟಿಕೆಗಳ ಪಟ್ಟಿಗೆ ಕೊನೆಯೇ ಇಲ್ಲ. ನಮಗೆ ಗೊತ್ತಿರುವಂತಹ ಇನ್ನೂ ಕೆಲವನ್ನು ಇದಕ್ಕೆ ಸೇರಿಸಬಹುದು, ಅವೆಂದರೆ ಹೊಲಿಗೆ, ಉಡುಪುತಯಾರಿಕೆ, ಹಪ್ಪಳ, ಉಪ್ಪಿನಕಾಯಿ ತಯಾರಿಕೆ, ಆಹಾರ ಸಂರಕ್ಷಣೆ, ಆಗ್ರೋ ಕೈಗಾರಿಕೆ, ರೇಷ್ಮೆಕೈಗಾರಿಕೆ, ಕೋಳಿಸಾಕಾಣಿಕೆ, ಮೇಕೆಕುರಿ ಸಾಕಾಣಿಕೆ, ಡೈರಿ, ಮೊಲಸಾಕಾಣಿಕೆ, ಹರಳು ಕತ್ತರಿಸುವುದು, ಎಲೆಕ್ಟ್ರಾನಿಕ್ ಸಾಮಗ್ರಿಗಳು, ಕರಕುಶಲವಸ್ತುಗಳು, ಚರ್ಮಹದ ಮಾಡುವುದು, ಚರ್ಮದ ವಸ್ತು ತಯಾರಿಕೆ, ಸೋಪು ತಯಾರಿಕೆ, ಕಡಿಮೆ ವೆಚ್ಚದ ಮನೆ ಕಟ್ಟುವುದು, ಜಲಕೃಷಿ, ತೋಟಗಾರಿಕೆ ಇತ್ಯಾದಿ ಇತ್ಯಾದಿ. ಹೀಗಾಗಿ ಈ ಪಟ್ಟಿ ಬಹುಮಟ್ಟಿಗೆ ಅನಂತ.

ಈ ಎಲ್ಲಾ ಯೋಜನೆಗಳನ್ನು ಜನರ ಬಳಿಗೆ ಕೊಂಡೊಯ್ಯುವುದೇ ಸಾಕ್ಷರೋತ್ತರ ಕಾರ್ಯಕ್ರಮದ ಪ್ರಮುಖ ಕೊಡುಗೆಯಾದೀತು. ಇದರಿಂದ ಬರುವ ಫಲಿತಾಂಶವಂತೂ ನಿಜವಾಗಿಯೂ ಅವರ ಜೀವನವನ್ನು ಸದೃಢಗೊಳಿಸಲು ಮತ್ತು ಅವರ ವಾಸ್ತವ ಜೀವನದ ಸುಧಾರಣೆಗೆ ನೆರವಾಗುತ್ತದೆ.

ಮೇಲೆ ನಾನು ಮಾಡಿರುವ ''ಬಲವಾದ ಸಮರ್ಥನೆ'' ಇಷ್ಟೆ, ಜನರು ಇದನ್ನು ಬಯಸುತ್ತಾರೆ. ಅವರು ನವಸಾಕ್ಷರರಾಗಿಲಿ, ಸ್ವಯಂಸೇವಕರಾಗಲಿ, ಸಂಘಟಕರಾಗಲಿ, ನೀವು ಅವರ ಬೇಡಿಕೆ ಕೇಳಿ ಪೂರೈಸಲು ಮುಂದಾಗಬಹುದಾದರೆ ಮೇಲಿನ ಬೇಡಿಕೆಗಳಷ್ಟು ಗಟ್ಟಿಯಾಗಿ ಯಾವುವೂ ಉಳಿಯಲಾರವು. ಅವುಗಳಿಗೆ ಪ್ರತಿಕ್ರಿಯೆ ತೋರಿಸುವುದು ನಮ್ಮ ಕರ್ತವ್ಯ. ಅವರು ಸ್ವಯಂಪ್ರೇರಿತರಾಗಿ ಶಾಲೆಗೆ ಬಂದಿದ್ದಾರೆ, ಕಲಿತಿದ್ದಾರೆ. ಇದು ಅವರಿಗೆ ಸಹಾಯ ಮಾಡುವ ಅರ್ಥಪೂರ್ಣ ಮಾರ್ಗ. ಹಾಗೆಯೇ ಯುನೆಸ್ಕೋ ಪ್ರಕಾರ ''ಕೌಶಲಾಧಾರಿತ ಸಾಕ್ಷರತೆ'' ತುಂಬಾ ಪರಿಣಾಮಕಾರಿ ವಿಧಾನ.

ಪ್ರಶ್ನೆ : ಆರೋಗ್ಯ, ಪ್ರಾಥಮಿಕ ಶಿಕ್ಷಣ ಮತ್ತು ಅಂತಹ ಅಭಿವೃದ್ಧಿ ಕ್ಷೇತ್ರಗಳ ಬಗ್ಗೆ ಯಾವ ರೀತಿ ಸಹಾಯಮಾಡಬಹುದು ?

ಉತ್ತರ : ಈ ಕ್ಷೇತ್ರಗಳು ತುಂಬಾ ಮುಖ್ಯವಾದವುಗಳೆ, ಇದರೊಂದಿಗೆ ನಾನು ಒಂದು ಪ್ರಮುಖ ಆರೋಗ್ಯಶಿಕ್ಷಣ ಆಂದೋಲನ, ಸಮರ್ಪಕ ತರಬೇತಿ, ಆರೋಗ್ಯ ಕಾರ್ಯಕರ್ತರ ತರಬೇತಿಯ ಬಗ್ಗೆ ಸಲಹೆ ಮಾಡುತ್ತೇನೆ. ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಶಾಲೆಯ ಕಾರ್ಯವಿಧಾನವನ್ನು ಖಚಿತಪಡಿಸಿಕೊಳ್ಳ ಬೇಕಾದುದು ಸಮರ್ಪಕ ತನಿಖೆ ಮತ್ತು ಶಿಕ್ಷಕ ತರಬೇತಿ ಕಾರ್ಯಕ್ರಮ ಗಳಿಂದ. ಶಾಲೆ ಬಿಡುವ ಮಕ್ಕಳಿಗೆ.ಮತ್ತು ನೋಂದಾಯಿಸಲ್ಪಡುವ ಮಕ್ಕಳಿಗೆ ಅನೌಪಚಾರಿಕ ಶಿಕ್ಷಣ ಯೋಜನೆ ಬಳಸಬಹುದು. ಇದಕ್ಕೆ ಸರ್ಕಾರದಿಂದಲೂ ಅವಕಾಶ ಕಲ್ಪಿಸಲಾಗಿದೆ. ಬಾಲಕಾರ್ಮಿಕ ಮಕ್ಕಳ ವಿಷಯದಲ್ಲಿ ಯಾವ ಸಮರ್ಪಕ ಉತ್ತರವೂ ಇಲ್ಲ. ಆದರೆ ಅದನ್ನು ನಿಷೇಧಿಸಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಮಾಡಬೇಕು. ಅಂತಹ ಪ್ರಯೋಗ ಪ್ರಪಂಚದಾದ್ಯಂತ ಉಪಯೋಗವಾಗುತ್ತದೆ ಮತ್ತು ಆದರಿಂದಾಗುವ ಲಾಭ ಹೆಚ್ಚು. ಯಾವುದೇ ಒಬ್ಬ ಪೋಷಕನಿಗೆ ತನ್ನ ಮಗುವಿಗೆ ಶಿಕ್ಷಣ ಬೇಡ ಎನ್ನುವ ಹಕ್ಕು ಇರುವುದಿಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಪ್ರಶ್ನೆ : ಆದರೆ ಈ ಆದಾಯ ತರುವ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದು ಸುಲಭವೆ? ಅದಕ್ಕೆ ಅಧಿಕ ತರಬೇತಿ, ಸಂಪನ್ಮೂಲವ್ಯಕ್ತಿಗಳು ಮತ್ತು ಶ್ರಮ ಅಗತ್ಯ.

ಉತ್ತರ : ಯಾರೂ ಅದು ಸುಲಭವೆಂದು ಹೇಳುತ್ತಿಲ್ಲ. ಇದನ್ನು ಸರ್ಕಾರ ಅದರಲ್ಲೂ ವಿಶೇಷವಾಗಿ ಜಿಲ್ಲಾಧಿಕಾರಿಗಳು ತಮ್ಮ ಸಂಪೂರ್ಣ ಬೆಂಬಲ ನೀಡಿದರೆ ಮಾತ್ರ ಸಾಧಿಸಬಹುದು. ಇಂತಹ ಉದ್ದೇಶಗಳಿಗೆ ಎಲ್ಲಾ ಬ್ಯಾಂಕುಗಳಲ್ಲೂ ಯೋಜನೆಗಳಿವೆ ಮತ್ತು ಅಂತಹ ಉದ್ದೇಶಗಳಿಗೆ ಜೆಆರ್‌ವೈ, ಟ್ರೈಸಂ, ಕೈಗಾರಿಕಾ ವಿಭಾಗ, ಡ್ವಾಕ್ರಾ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಲ್ಯಾಣ ಮುಂತಾದ ಯೋಜನೆಗಳಡಿಯಲ್ಲಿ ಹಣದ ಸಹಾಯವೂ ಸಿಗುತ್ತದೆ.

ಪ್ರಶ್ನೆ : ಆದರೆ ಒಂದು ವೇಳೆ ಬಿಜಿವಿಎಸ್ ಇವೆಲ್ಲ ಯೋಜನೆಗಳನ್ನು ನಡೆಸುವುದಾದರೆ ಸರ್ಕಾರ ಏನು ಮಾಡುತ್ತದೆ? ಎಲ್ಲಾ ಕೆಲಸವನ್ನೂ ಸ್ವಯಂ ಸೇವಕರು ಮಾಡಿದರೂ ಹಣ ಪಡೆದು ಕೆಲಸ ಮಾಡುವವರು ಕೆಲಸ ಮಾಡುವುದೇ ಇಲ್ಲ.

ಉತ್ತರ : ನೀವು ದಾರಿಯಲ್ಲಿ ಇದ್ದೀರಿ. ಈ ಎಲ್ಲಾ ಕೆಲಸಗಳನ್ನೂ ಸರ್ಕಾರವೇ ಮಾಡಬಹುದು ಮತ್ತು ಈ ಎಲ್ಲವನ್ನೂ ಸರ್ಕಾರವೇ ನಿರ್ವಹಿಸಬೇಕು. ಆದರೆ ಬಿಜಿವಿಎಸ್ ಅಂತಹ ಶಕ್ತಿಗಳು ಈ ಎಲ್ಲಾ ಯೋಜನೆಗಳೂ ಜನರಿಗೆ ತಲುಪುತ್ತವೆಯೋ ಎಂಬುದರ ಬಗ್ಗೆ ಖಚಿತಪಡಿಸಿಕೊಂಡು ಕಾರ್ಯಕ್ರಮವನ್ನು ಹೆಚ್ಚು ಪರಿಣಾಮಕಾರಿಯಾಗಿ ಮಾಡಲು ಪ್ರಯತ್ನಿಸಬೇಕು. ಜನರಿಗೆ ಸಹಾಯ ಮಾಡಲು ಇದೊಂದೇ ಮಾರ್ಗ ಎಂಬುದು ಸ್ಪಷ್ಟ.

## ಪ್ಯಾನೆಲ್ ಸದಸ್ಯ -2 ಜನವಿಜ್ಞಾನ ಚಳುವಳಿಗಳ ಸ್ಥಾನ

(ಜನವಿಜ್ಞಾನ ಚಳುವಳಿಯ ಹೆಚ್ಚು ಕಾರ್ಯಕರ್ತರು ಇದನ್ನು ತಮ್ಮ ಮುಖ್ಯ ಕಾರ್ಯಕ್ರಮ ಎಂದುಕೊಂಡಿಲ್ಲ. ಇದನ್ನು ಜನ ವಿಜ್ಞಾನ ಚಳುವಳಿ ಯೋಜನೆ ಎಂದೇ ಹೆಸರಿಸಿರುವುದು. ಸರಿಯಾದ ಹೆಸರು ಸಿಕ್ಕಿಲ್ಲ ಎಂಬ ಕಾರಣಕ್ಕಾಗಿ. ಸರ್ಕಾರೇತರ ಸಂಸ್ಥೆಗಳು ಅಥವಾ ರಾಜಕೀಯ ವ್ಯಕ್ತಿಗಳುಈ ರೀತಿಯ ಕಲ್ಪನೆಗಳನ್ನು ಸ್ವೀಕರಿಸಲು ಸಿದ್ಧರಿಲ್ಲ)

ಈ ಪರಿಸ್ಥಿತಿಯಲ್ಲಿ ಸಾಕ್ಷರೋತ್ತರ ಕಾರ್ಯಕ್ರಮವನ್ನು ಅಭಿವೃದ್ಧಿ ಕಾರ್ಯಕ್ರಮಗಳೊಂದಿಗೆ ಜೋಡಿಸುವುದು ಬಿಟ್ಟರೆ ಬೇರೆ ಯೋಜನೆಯ ಬಗ್ಗೆ ಮಾತನಾಡಲಾಗದು ಎಂದು ನನಗನ್ನಿಸುತ್ತದೆ. ನಾನು ಅಭಿವೃದ್ಧಿ ಎಂದರೇನು ? ಯಾರಿಗಾಗಿ ಎಂಬ ವಿಶಾಲ ತಿಳುವಳಿಕೆಯ ಒಳಹೋಗುವುದಿಲ್ಲ. ಈ ಅವಧಿಯಲ್ಲಿ ಮಾಡಬೇಕಾದ ನಿರ್ದಿಷ್ಟ ಕೆಲಸಗಳಿಗೆ ಸೀಮಿತಗೊಳಿಸಲು ಇಷ್ಟಪಡುತ್ತೇನೆ. ಇದರಲ್ಲಿ ಹಲವಾರು ಸಮಸ್ಯೆಗಳಿವೆ ಎಂದು ನನಗನ್ನಿಸುತ್ತದೆ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಮೊದಲು ಆದಾಯ ತರುವ ಮತ್ತು ಉದ್ಯೋಗ ಕೊಡುವ ಯೋಜನೆಗಳನ್ನು ಅಭಿವೃದ್ಧಿ ಕಾರ್ಯಕ್ರಮಗಳೊಂದಿಗೆ ಹೊಂದಿಸಲು ನಮ್ಮ ಗಮನ ಕೇಂದ್ರೀಕೃತ ವಾಗಬಾರದೆಂದು ನನ್ನ ಅಭಿಮತ ಹಾಗೆ ಆದ್ಯತೆ ಕೊಡುವುದೇ ಆದರೆ ಅದನ್ನು ಹೆಚ್ಚು ಎಚ್ಚರಿಕೆಯಿಂದ ಯಾವುದೇ ತೊಂದರೆಯಾಗದಂತೆ ಕೇವಲ ತಂಡದ ಅನುಭವ ಹೆಚ್ಚಿಸಿಕೊಳ್ಳಲು ಮತ್ತು ತಿಳುವಳಿಕೆ ಬೆಳೆಸಿಕೊಳ್ಳಲು ಮತ್ತು ಮುಂದೆ ಉಪಯೋಗ ವಾಗುವಂತೆ ವ್ಯವಸ್ಥೆ ಮಾಡಬೇಕು. ಎಲ್ಲಾ ಸರ್ಕಾರಿ ಯೋಜನೆಗಳು 5000 ಕ್ಕೆ ಕಡಿಮೆ ಇಲ್ಲದಂತೆ ಜನರಿಗೆ ಉಪಯೋಗವಾಗುತ್ತದೆ. ಆದರೂ ಇದು ಉದಾರವಾದ ಒಂದು ಮಿತಿಮೀರಿದ ಹೇಳಿಕೆಯಾಗುತ್ತದೆ. ಆದರೂ ಒಂದು ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಸಾಮಾನ್ಯವಾಗಿ ಕನಿಷ್ಠ 1 ಲಕ್ಷ ನವಸಾಕ್ಷರರಿರುತ್ತಾರೆ. ಆದ್ದರಿಂದ ಅನೇಕ ನವಸಾಕ್ಷರರು ತಾವು ಹೊರಗಿಟ್ಟಲ್ಪಟ್ಟವರೆಂದು ಮತ್ತು ತಮ್ಮ ವಿರುದ್ಧ ಪಕ್ಷಪಾತ ತೋರಲಾಗಿದೆ ಎಂದುಕೊಳ್ಳುತ್ತಾರೆ. ಸಾಲನೀಡುವಾಗ ಫಲಾನುಭವಿಗಳನ್ನು ಹುಡುಕು ವುದೂ ಅಷ್ಟು ಸುಲಭವಲ್ಲ (ಮತ್ತು ಶಾಸಕರು ನೀವು ಜನರನ್ನು ಸಾಕ್ಷರರನ್ನಾಗಿ ಮಾಡಿದ್ದೀರಿ ಎಂಬ ಕಾರಣಕ್ಕೆ ತಮ್ಮ ಖೋಟಾವನ್ನು ಎಂದಿಗೂ ಕಡಿಮೆ ಮಾಡಿಕೊಳ್ಳಲು ಇಷ್ಟಪಡುವುದಿಲ್ಲ ಎಂಬುದನ್ನು ಮರೆಯದಿರಿ)

ಎರಡನೆಯದಾಗಿ ಫಲಾನುಭವಿಗಳನ್ನು ಗುರುತಿಸಿದ ನಂತರವೂ ವೃತ್ತಿಕೌಶಲ್ಯಗಳನ್ನು ಅನೇಕ ನೂರು ಜನರಿಗೆ ಕೊಡಲು ಹೆಚ್ಚು ಸಂಪನ್ಮೂಲ ವ್ಯಕ್ತಿಗಳ ಅವಶ್ಯಕತೆ ಇದೆ ಮತ್ತು ಅನೇಕಾನೇಕ ಅನುಕೂಲಗಳು ಮತ್ತು ಹಣದ ಅವಶ್ಯಕತೆಯೂ ಇದೆ.

ಮೂರನೆಯದಾಗಿ ತರಬೇತಿಯ ನಂತರವೂ ಅಗತ್ಯವಿದ್ದಷ್ಟು ಬಂಡವಾಳ ಪಡೆದುಕೊಳ್ಳುವುದು ಸುಲಭವೇನಲ್ಲ. ಇದಲ್ಲದೆ ಆಡಳಿತಾತ್ಮಕ ಕೌಶಲಿಗಳು ಮತ್ತು ಸಹಾಯಕ ಸೇವೆ ಮಾಡುವ ಸಾಹಸಿಗಳು ಅಗತ್ಯ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

*38*

ಮತ್ತು ಕೊನೆಯದಾಗಿ ಮಾರುಕಟ್ಟೆಯೇ ದೊಡ್ಡ ಸಮಸ್ಯೆ. ಯಾರೇ ಆಗಲಿ ವಸ್ತುಗಳನ್ನು ತಯಾರಿಸಬಹುದು. ಆದರೆ ಅವನ್ನು ಮಾರುವುದು ಹೇಗೆ ? ವಾಸ್ತವವಾಗಿ ಪ್ರತಿಯೊಂದು ಜಿಲ್ಲೆಯಲ್ಲಿಯೂ ಕೆಲವೇ ನೂರು ಜನ ಇಂತಹ ಯೋಜನೆಗಳನ್ನು ಪ್ರಾರಂಭಿಸಿ ಅದನ್ನು ಊರ್ಜಿತಗೊಳಿಸಲು ತುಂಬಾ ಕಷ್ಟಪಡುತ್ತಾರೆ. ಆದರೆ "ಕೆಲವೇ ನೂರು ಸಹ ಅರ್ಥಪೂರ್ಣ" ಎಂಬುದನ್ನು ನಾನು ನಿರಾಕರಿಸುವುದಿಲ್ಲ. ಆದರೆ ಈ ಸಂಖ್ಯೆಯನ್ನೇ ಮಾದರಿಯನ್ನಾಗಿಸಿಕೊಂಡರೆ ತಪ್ಪಾದೀತು. ನನಗೆ ತಿಳಿದಿರುವಂತೆ ಇದನ್ನು ಪ್ರಯತ್ನಿಸಿದ ಅನೇಕ ಜಿಲ್ಲೆಗಳಿವೆ. ಆದರೆ ಅಲ್ಲಿ ಒಂದು ಹಿಡಿಯಷ್ಟು ಮಂದಿಗೂ ಲಾಭವಾಗಿಲ್ಲ.

ಪ್ರಶ್ನೆ : ಹಾಗಾದರೆ ಎಲ್ಲಾ ಸಾಕ್ಷರೋತ್ತರ ಕಾರ್ಯಕ್ರದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ತಳಕು ಹಾಕುವುದು ಸಾಧ್ಯವೇ ಇಲ್ಲವೆ ?

ಉತ್ತರ : ನಾನು ಈ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜತೆಗೂಡಿಸುವುದನ್ನು ಬೇರೆ ದೃಷ್ಟಿಕೋನದಿಂದ ನೋಡುತ್ತೇನೆ. ಸಾಕ್ಷರತೆಯೇ ಒಂದು ಅಭಿವೃದ್ಧಿಯ ಸಂಕೇತ. ಇದನ್ನು ನಾವು ಸಾಧಿಸಿದ್ದೇವೆ. ಈಗ ಇನ್ನೂ ಹೆಚ್ಚಿನ ಅಭಿವೃದ್ಧಿ ಸಾಧಿಸುವಂತಹ ಕಾರ್ಯಕ್ರಮಗಳನ್ನು ಗ್ರಂಥಾಲಯ, ನಿರಂತ ಶಿಕ್ಷಣದ ಅನುಕೂಲತೆ ಪ್ರಾಥಮಿಕ ಶಿಕ್ಷಣಕ್ಕಾಗಿ ಆಂದೋಲನ, ಆರೋಗ್ಯ ಕಾರ್ಯಕ್ರಮ ಮುಂತಾದವುಗಳ ಮೂಲಕ ಜನತೆಗೆ ಕೊಡಬೇಕು.

ಪ್ರಶ್ನೆ : ಇಲ್ಲ, ನೀನು ಸಮಸ್ಯೆಯನ್ನು ಮುಚ್ಚಿಡಲು ನೋಡುತ್ತಿದ್ದೀಯ, ಹಣ ಕೊಡುವ ಉದ್ಯೋಗ ಕೊಡುವ ಯೋಜನೆಗಳ ಬಗ್ಗೆ ನಿನ್ನ ಖಚಿತವಾದ ನಿಲುವೇನು ? ಇದೇ ಜನಕ್ಕೆ ಬೇಕಾಗಿರುವುದು, ಇದನ್ನೇ ಜನರು ಒತ್ತಾಯಿಸುವುದು.

ಉತ್ತರ : ಇದರ ಬಗ್ಗೆ ನಾನು ಸ್ವಲ್ಪ ಪ್ರಯತ್ನ ಪಡಬಲ್ಲೆನೆಂಬ ವಿಶ್ವಾಸ ನನಗಿದೆ. ಆದರೆ ನಾನು ನಿಜವಾಗಿಯೂ ಯಾವ ಮಾರ್ಗದಲ್ಲಿ ಪ್ರತಿಯೊಬ್ಬರಿಗೂ ಕನಿಷ್ಠ ಆದಾಯ ಮತ್ತು ಉದ್ಯೋಗ ಸಿಗುತ್ತದೆಂದು ಹೇಳಬಲ್ಲೆ. ಹಾಗಾದರೆ, ಸಮಾಜದ ಎಲ್ಲಾ ಸಮಸ್ಯೆಗಳು ಬಗೆಹರಿದಂತಾಯಿತು ಅಥವಾ ಕನಿಷ್ಠಪಕ್ಷ ಅವುಗಳಲ್ಲಿ ಹೆಚ್ಚಿನವು ಬಗೆ ಹರಿಯುತ್ತವೆ. ಆದರೆ ಅದು ಅಷ್ಟು ಸರಳವಾದುದಲ್ಲ. ಇದರಲ್ಲಿ ಅನೇಕ ಆರ್ಥಿಕ ಮತ್ತು ಸಾಮಾಜಿಕ ಅಂಶಗಳನ್ನು ಪರಿಗಣಿಸಬೇಕಾಗುತ್ತದೆ.

ಪ್ರಶ್ನೆ : ನೀವು ಜಿಲ್ಲಾಧಿಕಾರಿಯವರ ಯೋಜನೆಯೇ ಹಣ ಮತ್ತು ಉದ್ಯೋಗ ನೀಡುವ ಉತ್ತಮ ಯೋಜನೆ ಎಂದು ಸಲಹೆ ಮಾಡುತ್ತಿದ್ದೀರಾ ?

ಉತ್ತರ : ನೀವು ಅಭಿವೃದ್ಧಿಯನ್ನು ಆ ದೃಷ್ಟಿಕೋನದಿಂದ ನೋಡಿದರೆ ಅದು ಸತ್ಯ. ಅಲ್ಲದೆ ಒಂದು ರೀತಿಯಲ್ಲಿ ನೋಡಿದರೆ ಆರೋಗ್ಯ ಮತ್ತು ಪ್ರಾಥಮಿಕ ಶಿಕ್ಷಣದಲ್ಲಿ ಅವರ ಸಲಹೆಗಳೇ ಏಕೆ ಉತ್ತಮ ಸಲಹೆಗಳಾಗಿರಬಾರದು.

ಆದರೆ ಅದನ್ನು ನಾನು ಶಿಫಾರಸ್ಸು ಮಾಡುವುದಿಲ್ಲ. ಅಂತಹ ಪರಿಹಾರಗಳು ಕೆಲಸ ಮಾಡಲಾರವು. ಅವು ಇಂದಿನ ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳಿಗಿಂತ ಏನೂ ಭಿನ್ನವಾಗಿರುವುದಿಲ್ಲ. ಆದರೆ ಈಗ ಸರ್ಕಾರ ಮಾತ್ರವಲ್ಲದೆ ಬಿಜಿವಿಎಸ್ ಅಥವಾ ಜಿಲ್ಲಾ ಸಾಕ್ಷರತಾ ಸಮಿತಿ ಇವನ್ನು ಕಾರ್ಯರೂಪಕ್ಕೆ ತರುತ್ತಿದ್ದಾರೆ. ಇದನ್ನು ಹೇಗೆ ಸಲಹೆ ಮಾಡಬಹುದೆಂದರೆ ಸಾಕ್ಷರತಾ ಕೆಲಸದಲ್ಲಿ ಬಿಜಿವಿಎಸ್ ಕಾಣಿಕೆ ನೀಡಬೇಕೆಂದರೆ ಅದು ಕ್ರಿಯಾತ್ಮಕ ಸಾಕ್ಷರತಾ ಯೋಜನೆಯನ್ನು ನಡೆಸುವುದಲ್ಲದೆ ಬೇರೆ ಯಾವ ಹೊಸ ಯೋಜನೆಗಳೂ ಫಲಕಾರಿಯಾಗಲಾರವು. ಬಿಜಿವಿಎಸ್ ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳ ಗುತ್ತಿಗೆದಾರನಾಗುವುದಕ್ಕಿಂತಲೂ ಉತ್ತಮ ಕೆಲಸ ಮಾಡಬೇಕೆಂಬುದು ನನ್ನ ಅಭಿಪ್ರಾಯ.

ಪ್ರಶ್ನೆ : ಆದರೆ ಹೊಸ ಪ್ರಯತ್ನ ಏನು ?

ಉತ್ತರ : ನಾನು ಮೊದಲೇ ಹೇಳಿರುವಂತೆ ಇದೇ ನಿರ್ದಿಷ್ಟವಿಧಾನ ಎಂದು ಹೇಳುವಂತೆ ಇಲ್ಲ. ಈ ಹಂತದಲ್ಲಿ ''ಇಂತಹದೇ. ವಿಧಾನ'' ಎಂಬುದಿಲ್ಲ. ಕೇವಲ ನಾನು ಕೆಲವು ಮುಖ್ಯಾಂಶಗಳನ್ನು ಕೆಲವು ನಿರ್ದೇಶನಗಳನ್ನು ಹೊರತೆಗೆಯ ಬೇಕಲ್ಲದೆ ಕೆಲವು ರೀತಿಯಲ್ಲಿ ಮುಂದುವರಿಕೆಗಳನ್ನು ತಡೆಯಬೇಕಾಗುತ್ತದೆ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು



ನನ್ನ ಪ್ರಕಾರ ಸಮಸ್ಯೆ ಇರುವುದು ಜನ ಹೆಚ್ಚಿನ ಸಂಖ್ಯೆಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಮುಂದೆ ಬರುವುದು ಮತ್ತು ತಾನೇ ನಿರ್ಧಾರ ತೆಗೆದುಕೊಳ್ಳುವಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಆರಂಭ ಮೇಲಿನಿಂದ ಆದರೂ, ಅದರ ಸಂಪೂರ್ಣ ಯಶಸ್ಸು ಅದು ಎಷ್ಟರಮಟ್ಟಿಗೆ ನವಸಾಕ್ಷರರು ತಮ್ಮ ಕಾರ್ಯಕ್ರಮ ಎಂದು ತಿಳಿದು ಅದನ್ನು ಅಂತರ್ಗತ ಮಾಡಿಕೊಂಡಾಗ ಮಾತ್ರ, ಸಾಕ್ಷರೋತ್ತರ ಕಾರ್ಯಕ್ರಮ ಮುಂದು ವರಿದಂತೆ ಪ್ರತಿಯೊಂದು ಅಭಿವೃದ್ಧಿ ಕಾರ್ಯಕ್ರಮದೊಂದಿಗೆ ಅವನ್ನು ಜೋಡಿಸಿ ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅವರನ್ನು ಪಾಲ್ಗೊಳ್ಳು ವಂತೆ ಮಾಡುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡಬೇಕು.

ಎಂತಹ ಅಭಿವೃದ್ಧಿ ಕಾರ್ಯಕ್ರಮ ಬೇಕು ಎಂಬುದನ್ನು ಮತ್ತು ಅವನ್ನು ಎಂತಹ ಗುಂಪಿಗೆ ತಲುಪಿಸಬೇಕು ಎಂಬುದನ್ನು ನಿರ್ಧರಿಸುವುದು ನಮ್ಮ ಕೆಲಸವಲ್ಲ. ಅವರಿಗೇ ನಿರ್ಧಾರ ತೆಗೆದುಕೊಳ್ಳಲು ಬಿಡಬೇಕು. ಇಂದು ಅವರು ನಿರ್ಧಾರ ತೆಗೆದು ಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಇದರಲ್ಲಿ ಸರಿಸಮನಾಗಿ ಭಾಗವಹಿಸಲು ತಾವೇ ನಿರ್ಧಾರ ತೆಗೆದುಕೊಳ್ಳಲು ಅವರಿಗೆ ಅರಿವು, ಜ್ಞಾನ, ಸಂಘಟನಾತ್ಮಕ ನೆರವು, ಆತ್ಮವಿಶ್ವಾಸ ಮತ್ತು ಅವರ ಮನೋಭಾವದಲ್ಲಿ ಬದಲಾವಣೆ ಬರಬೇಕಾಗಿದೆ.

## ಅರಿವು (ಜ್ಞಾನ)

ನಾವು ಮೊದಲು ಮಾಡಲೇಬೇಕಾದ ಕೆಲಸವೆಂದರೆ ಜನಸಮುದಾಯಕ್ಕೆ ಅಂದರೆ ಸ್ವಯಂಸೇವಕರಿಗೆ, ಕಲಿಯುವವರಿಗೆ, ಸಂಘಟನಕರಿಗೆ ಮತ್ತು ಇತರ ಎಲ್ಲಾ ಜನರಿಗೆ ಅವರು

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು



ಪಾಲ್ಗೊಳ್ಳುವ ಬೇಕಾಡ ಅಗತ್ಯ ತಿಳುವಳಿಕೆ, ಕಾನೂನಿನ ತಿಳುವಳಿಕೆ, ವಿಜ್ಞಾನ ತಂತ್ರಜ್ಞಾನದ ತಿಳುವಳಿಕೆ, ಸಾಮಾಜಿಕ ಸಂಸ್ಥೆಗಳ ಅರಿವು, ಪ್ರಾಪಂಚಿಕ ಜ್ಞಾನ ಮತ್ತು ವಿವಿಧ ಕ್ಷೇತ್ರದ ಸಫಲತೆ-ವಿಫಲತೆಗಳ ಬಗ್ಗೆ ಸಂಪೂರ್ಣವಾದ ತಿಳುವಳಿಕೆ ಕೊಡಬೇಕು.

ಇದೊಂದೇ ವಿಷಯವನ್ನು ಮಾತ್ರ ತಿಳಿಸದೆ ಅವರಿಗೆ ಅನೇಕ ಕೌಶಲಗಳ ಜ್ಞಾನವನ್ನೂ ತಿಳಿಸಬೇಕಾಗಿದೆ. ಅದು ಕಲಿಕೆಯ ಕೌಶಲವಾದ ಓದುವಿಕೆ, ಸಂವಾಹಕ ಕೌಶಲವಾದ ಬರವಣಿಗೆ ಅಥವಾ ನಿರ್ದಿಷ್ಟ ಕೌಶಲಗಳು ಉದಾ : ಬಡಗಿ ಕೆಲಸ ಮಾಡುವುದು ಆಗಿರಬಹುದು, ಹೀಗೆ ಜನಗಳ ಕೈ ಬಲಪಡಿಸಲು ಇಂತಹ ಅನೇಕ ಕೌಶಲಗಳನ್ನು ಕಲಿಸುವ ಅವಶ್ಯಕತೆ ಇದೆ.

ಇದುವರೆಗೆ ಚರ್ಚಿಸಿರುವ ವಿಷಯಗಳಾದ ಆರೋಗ್ಯ, ಪ್ರಾಥಮಿಕ ಶಿಕ್ಷಣ ಮತ್ತು ಆದಾಯ ತರುವ ಚಟುವಟಿಕೆಗಳ ಬಗ್ಗೆ ಅವಲೋಕಿಸೋಣ ಆರೋಗ್ಯ ಕ್ಷೇತ್ರದಲ್ಲಿ ಜನ ಪಾಲ್ಗೊಳ್ಳಲು, ಜನರಿಗೆ ಆರೋಗ್ಯ ಕಾಪಾಡಿಕೊಳ್ಳಲು ಬೇಕಾದ ಅಂಶಗಳ ಬಗ್ಗೆ, ಕಾಯಿಲೆಯ ಲಕ್ಷಣ, ಕಾಯಿಲೆಯ ಕಾರಣ ಮತ್ತು ಅದನ್ನು ತಡೆಗಟ್ಟುವ ವಿಧಾನದ ಬಗ್ಗೆ ತಿಳುವಳಿಕೆ ಬರಬೇಕು. ಅಲ್ಲದೆ ಕಾಯಿಲೆ ಕಂಡು ಹಿಡಿಯುವ ಕೌಶಲ, ನೀರನ್ನು ಶುದ್ಧೀಕರಿಸುವುದು, ಅಶುದ್ಧ ವಸ್ತುಗಳನ್ನು ಗುರುತಿಸುವುದು, ಶೌಚಾಲಯ ಕಟ್ಟುವುದು ಮುಂತಾದವುಗಳ ಬಗ್ಗೆಯೂ ಅವರಿಗೆ ತಿಳಿದಿರಬೇಕು.

ಪ್ರಾಥಮಿಕ ಶಿಕ್ಷಣದಲ್ಲಿ ಜನಸಮುದಾಯಕ್ಕೆ ಶಾಲೆಯೆಂದರೆ ಏನು, ಅದು ಹೇಗಿರಬೇಕು ಎಂದು ತಿಳಿದಿರಬೇಕು. ಮಕ್ಕಳು ಶಾಲೆಯಲ್ಲಿ ಏಕೆ ಚೆನ್ನಾಗಿ ಓದುತ್ತಾ ಮುಂದುವರಿಯುತ್ತಾರೆ ಮತ್ತು ಏಕೆ ಶಾಲೆ ಬಿಡುತ್ತಾರೆ ಎಂಬುದು ತಿಳಿದಿರಬೇಕು. ಒಂದು ಮಗು ಸಾಧಿಸಬೇಕಾದ ಕಲಿಕಾ ಕೌಶಲಗಳೇನು ? ಅವನ್ನು ಖಚಿತಪಡಿಸಲು ತಾವು ಮಾಡಬೇಕಾದ ಚಟುವಟಿಕೆಗಳು ಏನು ? ಎಂಬುದರ ಬಗ್ಗೆ ತಿಳಿದಿರಬೇಕು.

ಆದಾಯ ತರುವಂತ ಚಟುವಟಿಕೆಗಳ ಬಗ್ಗೆ ಜನರು ತಿಳಿಯಬೇಕಾದುದು ತುಂಬಾ ಹೆಚ್ಚು. ಮೂಲ ಉತ್ಪಾದನೆಯಲ್ಲಿ ತೊಡಗಿರುವ ಬಹುಪಾಲು ಶಿಕ್ಷಣಾರ್ಥಿಗಳು (ಕಲಿಯುವವರು) ಕೃಷಿಕರು, ಹಾಗೂ ಪಶುಪಾಲನೆಯಲ್ಲಿ ಪಳಗಿರುವವರು, ಕಾಡು ಬೆಳೆಸುವವರು ಮತ್ತು ಮೀನುಗಾರರು ಇವರಿಗೆ ಯಾವ ಅಭಿವೃದ್ಧಿ ಕಾರ್ಯಕ್ರಮ ಕೊಡಬೇಕು ? ಕೃಷಿಕನಿಗೆ ಮೊದಲ ಸಮಸ್ಯೆ ಎಂದರೆ ಕೃಷಿಯಲ್ಲಿ ಹೆಚ್ಚು ಉತ್ಪಾದನೆ ಮಾಡುವುದು ಹೇಗೆ ? ಇದನ್ನು ಲಾಭದಾಯಕವಾಗಿ ಉಳಿಸಿಕೊಂಡು ಹೋಗುವುದು ಹೇಗೆ ? ಇದಕ್ಕೆ ಪ್ರಾಥಮಿಕವಾಗಿ ನೀರು ಉಣಿಸುವುದರ ನಿರ್ವಹಣೆ, ನೀರಾವರಿ ಬೆಳೆಗಳನ್ನು ಆಯ್ಕೆ ಮಾಡುವುದು, ಬೀಜದ ಗುಣ, ಗೊಬ್ಬರದ ಉಪಯೋಗ, ಕ್ರಿಮಿನಾಶಕ ಬಳಕೆ ಮುಂತಾದವುಗಳ ಬಗ್ಗೆ ತಿಳುವಳಿಕೆ ಬೇಕು. ಯಾರೂ ಕೂಡ ಸಮಕಾಲೀನ ಭಾರತದ, ಜಿಲ್ಲೆಯ ಅಭಿವೃದ್ಧಿಯ ಬಗ್ಗೆ ಹೇಳುವಾಗ ಮಣ್ಣು ಮತ್ತು ನೀರಿನ ನಿರ್ವಹಣೆಯ ಬಗ್ಗೆ ಒತ್ತಿ ಹೇಳಲೇಬೇಕಾಗುತ್ತದೆ.

ಮತ್ತೊಂದು ರೀತಿಯ ಉದ್ಯೋಗನಿರತ ಗುಂಪನ್ನು ಎರಡನೇ ರೀತಿಯ ವೃತ್ತಿಪರ ಚಟುವಟಿಕೆಯಲ್ಲಿ ತೊಡಗಿಸಬಹುದು. ಗ್ರಾಮೀಣ ಕುಶಲ ಕರ್ಮಿಗಳದ್ದು ಅಂತಹ ಒಂದು

ಗುಂಪು, ಗುಡಿಕೈಗಾರಿಕೆ, ಗುತ್ತಿಗೆ ಆಧಾರಿತ ಗೃಹಘಟಕಗಳಾದ ಬೀಡಿಕಟ್ಟುವುದು, ಬೆಂಕಿಕಡ್ಡಿತಯಾರಿಕೆ, ನೇಯ್ಗೆ, ಉಡುಪು ತಯಾರಿಸುವುದು, ಮುಂತಾದ ವೃತ್ತಿಪರರಿಗೆ ನಿರ್ದೇಶನ ಮುಖ್ಯ.

ಸಣ್ಣ ಪ್ರಮಾಣದ ಕೈಗಾರಿಕೆ ಮೂರನೆಯದು, ಕುಶಲಕರ್ಮಿಗಳು ಹೆಚ್ಚು ಉತ್ಪಾದಿಸುವಂತೆ ಮಾಡುವುದು ಹೇಗೆ? ಅದು ಲಾಭದಾಯಕವಾಗುವಂತೆ ನೋಡಿ ಕೊಳ್ಳುವುದು ಹೇಗೆ? ಅಂತಹ ಉತ್ಪಾದನೆಗಳಿಗೆ ಮಾರುಕಟ್ಟೆ ಒದಗಿಸುವುದು ಹೇಗೆ?

ಕೃಷಿಯಿಂದ ಅನೇಕ ಜನಗಳಿಗೆ ಕನಿಷ್ಠ ಮಟ್ಟದ ಜೀವನ ನಡೆಸಲು ನೆರವಾಗದ ಕಾರಣ ಜನ ಕೃಷಿಯಿಂದ ಎರಡನೆ ಮತ್ತು ಮೂರನೇ ವಿಭಾಗದ ಆದಾಯ ತರುವ ಚಟುವಟಿಕೆ ಇಚ್ಛಿಸುತ್ತಾರೆ. ಬಹಳ ಜನ ಕೃಷಿಯನ್ನೇ ಮುಂದುವರಿಸಿದರೂ ಮತ್ತಷ್ಟು ಆದಾಯ ಪಡೆಯಲು ಕರಕುಶಲ ವಸ್ತು ತಯಾರಿಕೆ, ಗುಡಿಕೈಗಾರಿಕೆ, ಅಥವಾ ವ್ಯಾಪಾರ ಮತ್ತು ಬೇರೆ ರೀತಿಯ ಸೇವೆಗಳಿಗೆ ಮೊರೆ ಹೋಗುತ್ತಾರೆ. ಈ ಅಭಿಲಾಷೆಯೇ ಆದಾಯ ತರುವ ಚಟುವಟಿಕೆಗಳು, ಉದ್ಯೋಗ ಕೊಡುವಂಥ ಯೋಜನೆಗಳ ಬೇಡಿಕೆಯಾಗಿ ಪ್ರತಿಬಿಂಬಿಸಲ್ಪಡುತ್ತದೆ. ಆದರೆ ಆಗ ಅವನು ಮಾರುಕಟ್ಟೆಯ ಬಗ್ಗೆ ತಿಳಿದಿರಬೇಕಾಗುತ್ತದೆ. ಈ ರೀತಿಯ ಉತ್ಪಾದನೆ ಮಾಡಲು ಬೇಕಾದ ತಿಳುವಳಿಕೆ,ಬಂಡವಾಳ ಮತ್ತು ಸಂಘಟನಾ ಕೌಶಲಗಳೆಲ್ಲದರ ಬಗ್ಗೆ ಅವನಿಗೆ ಗೊತ್ತಿರಬೇಕು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಕೆಲವು ಜಿಲ್ಲೆಗಳಲ್ಲಿ ವಿಶೇಷವಾಗಿ ಕೇರಳದಲ್ಲಿ ನೀರು ಮತ್ತು ಮಣ್ಣಿನ ಸಂಪನ್ಮೂಲ,ಖನಿಜ ಸಂಪನ್ಮೂಲಗಳಲ್ಲದೆ, ಪಂಚಾಯಿತಿಯಲ್ಲಿನ ಆಸ್ತಿಪಾಸ್ತಿಗಳ ಬಗ್ಗೆ ಪಂಚಾಯತಿಯಲ್ಲಿನ ಜನಗಳೇ ತಾವೇ ಸ್ವತಃ ತಮ್ಮ ಪಂಚಾಯಿತಿ ಸಂಪನ್ಮೂಲಗಳ ಭೂಪಟ ತಯಾರಿಸುವಂತೆ ತರಬೇತುಗೊಳಿಸಲಾಗಿದೆ. ಇದರೊಟ್ಟಿಗೆ ವಿಜ್ಞಾನಿಗಳ ಪೂರಕ ಜ್ಞಾನವನ್ನು ಸೇರಿಸುವ ಅಗತ್ಯ ಇದೆ. ಈ ರೀತಿ ಭೂಪಟ ತಯಾರಿಸುವುದರಿಂದ ಸ್ಥಳೀಯ ಕ್ಷೇತ್ರಾಭಿವೃದ್ಧಿಗೆ ಯೋಜನೆ ತಯಾರಿಸುವುದು ಸಾಧ್ಯವಾಗಿದೆ. ಇದಕ್ಕೆ ಬೇರೆ ಬೇರೆ ವಿಷಯಗಳಲ್ಲಿ ಪರಿಣತಿ ಇರುವ ವಿಜ್ಞಾನಿಗಳ ನೆರವನ್ನು ಪಡೆಯಲಾಗಿದೆ.

''ಪಂಚಾಯತಿ ಮಟ್ಟದ ಸಂಪನ್ಮೂಲ ಭೂಪಟ'' ತಯಾರಿಕೆ ಎಂದು ಕರೆಯಲ್ಪಡುವ ಈ ರೀತಿಯ ಚಟುವಟಿಕೆ, ಅಭಿವೃದ್ಧಿಯತ್ತ ಸಾಗುವ ತಿಳುವಳಿಕೆ ನೀಡುವಲ್ಲಿ ಸಾಕಷ್ಟು ಭರವಸೆ ಮೂಡಿಸಿದೆ.

ಮುಂದೆ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯ ಅಧ್ಯಯನ ಮತ್ತು ಮಾರುಕಟ್ಟೆ ಸರ್ವೇಕ್ಷಣೆ, ಗುಡಿಕೈಗಾರಿಕೆ ಪ್ರಾರಂಭಿಸುವುದು ಮತ್ತು ಸಣ್ಣ ಕೈಗಾರಿಕೆ ಯೋಚಿಸುವುದು ಹೇಗೆ ಮತ್ತು ಹೇಗೆ ಕರಕುಶಲ ಉತ್ಪಾದನೆಗೆ ನೆರವಾಗಬಹುದೆಂಬುದು ತಿಳಿಯುತ್ತದೆ. ಈ ರೀತಿಯ ಸಾಧನೋಪಾಯಗಳಿಂದ ಮಾತ್ರ ಯಾರೇ ಆಗಲಿ, ಹೆಚ್ಚು ಜನ ಫಲಾನುಭವಿಗಳಿಗೆ ಸಹಾಯವಾಗುವಂತಹ ಎರಡನೇ ದರ್ಜೆಯ ಸಾರ್ವಜನಿಕ ಉದ್ದಿಮೆಯನ್ನು ಸ್ಥಾಪಿಸಬೇಕು.

ಸಾಕ್ಷರೋತ್ತರ ಕಾರ್ಯಕ್ರಮದ ಧ್ಯೇಯೋದ್ದೇಶದೊಂದಿಗೆ ಅಭಿವೃದ್ಧಿ ಕಾರ್ಯ ಕ್ರಮವನ್ನು ಜೊತೆಗೂಡಿಸಲು ಬೇಕಾದ ತಿಳುವಳಿಕೆ ಮತ್ತು ಕೌಶಲಗಳು ವಿಶ್ವಕೋಶದಷ್ಟು ಅಗಾಧವಾದರೂ ಅದು ಪ್ರತಿಪಾದಿಸುವ ಸಮಸ್ಯೆಗಳು ಕ್ಲಿಷ್ಟವಾದವು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

### ಸಂಘಟನೆ

ಸಾಕ್ಷರೋತ್ತರ ಕಾರ್ಯಕ್ರಮದೊಂದಿಗೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜೊತೆಜೊತೆಯಾಗಿ ತೆಗೆದುಕೊಂಡು ಹೋಗುವುದಕ್ಕೆ ಯಾರಿಗೇ ಆಗಲಿ ಕೇವಲ ಕೌಶಲ ಮತ್ತು ತಿಳುವಳಿಕೆ ಮಾತ್ರ ಇದ್ದರೆ ಸಾಲದು, ಮುನ್ನಡೆಯಲು ಸಂಘಟನೆ ಮತ್ತು ಸಂಘಟನಾತ್ಮಕ ಮಾರ್ಗೋಪಾಯಗಳು ಅತ್ಯವಶ್ಯಕ. ಈ ಕೆಲಸ ಎತ್ತಿಕೊಳ್ಳಲು ಎಲ್ಲಾ ವರ್ಗದ ಜನರನ್ನು ಸಂಘಟಿಸುವುದು ಹೇಗೆಂದು ತಿಳಿದಿರಬೇಕು. ಜನರನ್ನು ಹೇಗೆ ಸಂಘಟಿಸಿದರೆ ಕಾರ್ಯಕ್ರಮಕ್ಕೆ ದೃಢತೆ ಕೊಡಬಹುದು ? ಎಂತಹ ಸಂಘಟನೆ ಯೋಜನೆಯನ್ನು ಅಭಿವೃದ್ಧಿಯತ್ತ ಕೊಂಡೊಯ್ಯುತ್ತದೆ ? ಎಂಬ ಪ್ರಶ್ನೆಗಳಿಗೆ ಉತ್ತರ ತಿಳಿದಿರಬೇಕು. ಸ್ಪಷ್ಟವಾಗಿ ಹೇಳಬೇಕಾದರೆ ಇದು ಒಂದು ಅಥವಾ ಎರಡು ವರ್ಷ ಅಷ್ಟೇಕೆ ಐದು ವರ್ಷದ ಯೋಜನೆಯೂ ಅಲ್ಲ.

ಅಂತಹ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಇಂತಹ ಸಂಘಟನಾತ್ಮಕ ಚೌಕಟ್ಟಿಗೆ ಒಳಪಡಲು ಎಲ್ಲಾ ಜನರು, ಕಡೇಪಕ್ಷ ಬಹಳ ಜನರು ಇಷ್ಟಪಡಬೇಕು. ಕಾರ್ಯಕ್ರಮದ ಉದ್ದೇಶಕ್ಕಾಗಿ ಹಣ ಕೂಡಿಸುವ ಮತ್ತು ಖರ್ಚು ಮಾಡುವ ಶಕ್ತಿ ಸಂಘಟನೆಗೆ ಬರಬೇಕು. ಇದಕ್ಕೆ ಹೀಗೆ ಮಾಡಲು ಅಧಿಕಾರವೂ ಇರಬೇಕು. ಗುಪ್ತಮತ ದಾನದ ಆಧಾರದ ಮೇಲೆ ಚುನಾಯಿತರಾದ ಪ್ರತಿನಿಧಿಗಳಿರುವ ಗ್ರಾಮ ಪಂಚಾಯಿತಿ ಮಾತ್ರ ಇದಕ್ಕೆ ಮಾದರಿ ಸಂಘಟನೆಯಾಗಬಲ್ಲುದು ಈಗ ಇದು ಒಂದೆರಡು ರಾಜ್ಯದಲ್ಲಿ ಕಂಡುಬಂದರೂ ಬೇರೆಡೆಯಲ್ಲಿ ಅತಿಶೀಘ್ರದಲ್ಲಿಯೇ ಬದಲಾವಣೆ ಕಾಣಬಹುದು.

ಪಂಚಾಯಿತಿ ಅಥವಾ ತಾಲ್ಲೂಕು ಮಟ್ಟದಲ್ಲಿ ನೋಂದಾಯಿತ ಅಭಿವೃದ್ಧಿ ಸಂಸ್ಥೆಗಳನ್ನು ಸಹ ಸಂಘಟನೆಗಳಾಗಿ ಬಳಸಿಕೊಂಡು ಎಲ್ಲಾ ಕೆಲಸ ಮಾಡಲು ಸಾಧ್ಯ. ಜಿಲ್ಲಾ ಆಡಳಿತ ಮತ್ತು ಸರ್ಕಾರಿ ಯಂತ್ರ ಜನ ಪಾಲ್ಗೊಳ್ಳುವುದು ಅಥವಾ ಸಾಮಾಜಿಕ ಜಾಗೃತಿಯನ್ನು ಇಷ್ಟಪಡದಿದ್ದರೂ ಹಣದ ಸಹಕಾರ ನೀಡುವಾಗ ಖಂಡಿತಾ ಅದು ಮುಖ್ಯ ಪಾತ್ರ ವಹಿಸಲು ಸಾಧ್ಯ.

ಆದರೆ ಇಂದಿನ ದಿನಗಳಲ್ಲಿ ಅಂತಹ ಆದರ್ಶವಾದ ಉದಾಹರಣೆ ಸಿಗುವುದು ಅಪರೂಪ ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ಜಿಲ್ಲಾಪರಿಷತ್ ಸಮಿತಿ ನಿರ್ವಹಿಸಿದರೆ ಭಾರತ ಜ್ಞಾನ ವಿಜ್ಞಾನ ಸಮಿತಿ ನಿರ್ಣಾಯಕ ಪಾತ್ರ ವಹಿಸುತ್ತದೆ. ಇದು ಜಿಲ್ಲೆ ಮತ್ತು ತಾಲ್ಲೂಕು ಗ್ರಾಮ ಮಟ್ಟದಲ್ಲಿ ಆಯ್ದ ಕಾರ್ಯಕರ್ತರನ್ನು ಗುರುತಿಸಿ ರಚಿಸಿದ ಸಮಿತಿಗಳ ಮೇಲೆ ಅವಲಂಬಿತವಾಗುವಂತಿರಬೇಕು ಮತ್ತು ಇದೂ ಕೂಡ ಅನೇಕ ಬಾರಿ ಸಾಕಾಗುವುದಿಲ್ಲ. ಏನು ಅವಶ್ಯಕತೆ ಇದೆ ಮತ್ತು ಇಂದು ಲಭ್ಯವಿರುವ ಸಂಪನ್ಮೂಲ ಏನು ಎಂಬುದರ ಮಧ್ಯೆ ನಿಜವಾಗಿಯೂ ಒಂದು ದೊಡ್ಡ ಕಂದರ ಇದ್ದೇ ಇದೆ. ಈ ಸಮಸ್ಯೆಯನ್ನು ನಿವಾರಿಸುವುದು ಹೇಗೆ ? ಇದರ ಅರಿವನ್ನು ಉಂಟು ಮಾಡಲು ಜನರನ್ನು ಸಂಘಟಿಸುವುದು ಹೇಗೆ ? ಈ ಎಲ್ಲಾ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಬೇಕಾದ ಸಂಘಟನಾತ್ಮಕ ತಂತ್ರ ಮತ್ತು ಸಾಮರ್ಥ್ಯವನ್ನು ಸಮುದಾಯ ಪಡೆದುಕೊಳ್ಳುವುದು ಹೇಗೆ ?

## ಆತ್ಮವಿಶ್ವಾಸ ಮತ್ತು ಧೋರಣೆ

ಜನಗಳಿಗೆ ಯೋಜನೆಯ ಬಗ್ಗೆ ಸಂಪೂರ್ಣ ಅರಿವಿದ್ದರೂ ಅವರು ಸಂಘಟಿತರಾಗಿದ್ದರೂ ಏಕಾಏಕಿ ಅವರು ಸ್ವತಃ ಯೋಜನೆ ಮಾಡುವ ಮತ್ತು ಅದನ್ನು ಕಾರ್ಯರೂಪಕ್ಕೆ ತರುವಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಒಂದು ಪಂಚಾಯಿತಿ ಎಂದರೆ ಜಾತಿ, ಧರ್ಮ, ಹೆಣ್ಣು, ಗಂಡು, ಬಡವ, ಧನಿಕ ಹೀಗೆ ಜಡಗೊಂಡ ವಿಭಾಗಗಳಿರುತ್ತವೆ. ಇವು ಒಂದು ದಿನದಲ್ಲಿ ಅದೃಶ್ಯವಾಗುವುದಿಲ್ಲ. ಹಲವಾರು ವಿಷಯಗಳಲ್ಲಿ ಉದಾ. ನೈರ್ಮಲ್ಯೀಕರಣ, ಕೃಷಿಯಲ್ಲಿ ಬೆಳೆಗಳನ್ನು ಕಾಲಕಾಲಕ್ಕೆ ಹಾಕುವುದು ಮುಂತಾದವುಗಳ ಬಗ್ಗೆ ನಕಾರಾತ್ಮಕ ಧೋರಣೆಗಳಿರುತ್ತವೆ. ಸಮಗ್ರ ಸಾಂಸ್ಕೃತಿಕ ದೃಷ್ಟಿ ಮತ್ತು ಸಾಮೂಹಿಕ ಯೋಜನೆ ಪ್ರಯತ್ನ ಸುಲಭ ಸಾಧ್ಯವಲ್ಲ.

ಇಂದಿನ ಸಮಾಜದಲ್ಲಿ ಚೆನ್ನಾಗಿ ಸಂಪಾದಿಸಿದವನನ್ನು ಅವನು ಜನಕ್ಕೆ ಮೋಸಮಾಡಿಯೋ ಅಥವಾ ಆಕ್ರಮವಾಗಿ ಸಂಪಾದಿಸಿದ್ದರೆ ಅವನನ್ನು ಎಲ್ಲೆಡೆ ಗೌರವಿಸುತ್ತಾರೆ. ಅಂತಹ ಕಡೆ ಸಾಮೂಹಿಕ ಯೋಜನೆ ಮತ್ತು ಪ್ರಯತ್ನ ಸುಲಭ ಸಾಧ್ಯವಲ್ಲ. ಅಲ್ಲದೆ ಇಂತಹ ಸಾಮೂಹಿಕ ಪ್ರಯತ್ನದ ಬಗ್ಗೆ ಅಪನಂಬಿಕೆ ಮತ್ತು ಸಿನಿಕತನಂ ತುಂಬಿ ತುಳುಕುತ್ತಿದೆ. ಜೊತೆಯಲ್ಲಿ ಒಟ್ಟಾಗಿ, ಯಶಸ್ವಿಯಾಗಿ ಕೆಲಸಮಾಡುವುದರ ಅನುಭವ ಮಾತ್ರ ಇಂತಹ ಧೋರಣೆಗಳಲ್ಲಿ ಬದಲಾವಣೆ ತಂದು ವಿಶ್ವಾಸ ಮೂಡಿಸಬಲ್ಲುದು.

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**

*43*

## ಪ್ರಕ್ರಿಯೆ

ಅಭಿವೃದ್ಧಿ ಕಾರ್ಯಕ್ರಮಕ್ಕಾಗಿ ಇಷ್ಟೊಂದು ದೊಡ್ಡ ರೀತಿಯ ಜನರ ಸಾಮೂಹಿಕ ಪ್ರಯತ್ನ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಕಂಡಿರುವುದು ಮೊಟ್ಟ ಮೊದಲ ಅನುಭವ. (ಸ್ವಾತಂತ್ರ ಚಳುವಳಿಯಿಂದೀಚೆಗೆ) ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅದು ಮಹಿಳಾ ಅಭಿವೃದ್ಧಿ ಆಗಿರಬಹುದು. ಪ್ರಾಥಮಿಕ ಶಿಕ್ಷಣ ಆಗಿರಬಹುದು, ಅಥವಾ ಆರೋಗ್ಯ ಆಗಿರಬಹುದು, ಇವನ್ನು ಸಾಕ್ಷರೋತ್ತರ ಕಾರ್ಯಕ್ರಮದ ಜೊತೆಗೂಡಿಸುವುದು ಇಂತಹ ತುಂಬಾ ಪ್ರಮುಖ ಪ್ರಯತ್ನ. ಎಲ್ಲಿ ಸಮುದಾಯ ಪ್ರಕ್ರಿಯೆಯನ್ನು ಅರ್ಥಮಾಡಿಕೊಂಡು ಅದರಲ್ಲಿ ಪಾಲ್ಗೊಳ್ಳಲು ಪ್ರೇರೇಪಿತರಾಗುವ ಪ್ರಯತ್ನ ನಡೆದಿದೆಯೋ ಅಲ್ಲಿ ಅವರು ನಿರ್ಧಾರ ತೆಗೆದುಕೊಳ್ಳುವವರಾಗುತ್ತಾರೆ. ಆದ್ದರಿಂದ ಹಲವಾರು ಹಣ ಪಡೆದು ಬೋಧಿಸುವ ಸ್ವಯಂಸೇವಕರು ಮತ್ತು ಮೇಲ್ವಿಚಾರಕರು ನಡೆಸುವ ಅನೌಪಚಾರಿಕ ಶಿಕ್ಷಣ, ಹಣ ಪಡೆಯುವ ಆರೋಗ್ಯಕಾರ್ಯಕರ್ತರ ಜಾಲ ಅಥವಾ ಭಾರತ ಜ್ಞಾನ ವಿಜ್ಞಾನ ಸಮಿತಿಗಳು ಮಾಡುವ ಹಲವಾರು ಕೆಲಸಗಳು ಉದಾ. ಬಾವಿ ತೋಡಿಸುವುದು, ಕಕ್ಕಸು ಮನೆ ಕಟ್ಟಿಸುವುದು, ಜಿಲ್ಲಾ ಪರಿಷತ್ ಸಾಲ ಕೊಡುವುದು ಯಾವುದೂ ಉತ್ತರವಲ್ಲ.

ಆದರೆ ಸ್ಥಳೀಯ ಜನರು ಆರೋಗ್ಯ ಅಥವಾ ಶಿಕ್ಷಣದ ಬಗ್ಗೆ ತಿಳುವಳಿಕೆ ಪಡೆದು, ಈ ಕ್ಷೇತ್ರಗಳಲ್ಲಿ ಸುಧಾರಣೆ ಮಾಡಲು ಜಂಟಿ ಯೋಜನೆ ರೂಪುಗೊಂಡರೆ ಭಾರತ ಜ್ಞಾನ ವಿಜ್ಞಾನ ಸಮಿತಿ ಆರೋಗ್ಯ ಅಥವಾ ಶೈಕ್ಷಣಿಕ ಕಾರ್ಯಕ್ರಮದಲ್ಲಿ ಸಹಾಯ ಮಾಡಬಲ್ಲುದು. ಇಷ್ಟರ ಮಟ್ಟಿಗಾದರೂ ಸರ್ಕಾರದ ನೆರವು ಅಗತ್ಯ.

ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು



ಈ ಪ್ರಕ್ರಿಯೆ ಎಂದರೆ

ಎ) ಅಂತಹ ಆಂದೋಲನ ಮತ್ತು ಕಾರ್ಯಕ್ರಮಗಳ ಪುನರಾವರ್ತನೆ

ಬಿ) ಜನರಿಗೆ ಯೋಜನೆಯ ಬಗ್ಗೆ ತಿಳಿಸುವ ಯೋಜಿತ ಪ್ರಕ್ರಿಯೆ

ಸಿ) ಜನರಿಗೆ ಸಂಘಟನೆ ರೂಪಿಸಲು, ಸಾಮೂಹಿಕವಾಗಿ ನಿರ್ಧಾರ ತೆಗೆದುಕೊಂಡು ತಾವೇ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ ನೆರವಾಗುವುದು.

ಡಿ) ಈ ಅನುಭವದಿಂದ ಅವರಿಗೆ ಆತ್ಮವಿಶ್ವಾಸ ಮತ್ತು ಹೊಸ ಧೋರಣೆ ಮೂಡಿಸಿ ಅಭಿವೃದ್ಧಿಯತ್ತ ಕೊಂಡೊಯ್ಯುವುದು.

ಎಂದು ನಾನು ಅರ್ಥ ಮಾಡಿಕೊಂಡಿದ್ದೇನೆ.

ಪ್ರಶ್ನೆ : ಮೇಲುನೋಟಕ್ಕೆ ಇದು ಪಂಚಾಯಿತಿ ಪರಿಣಾಮಕಾರಿಯಾಗಿ ಕೆಲಸ ಮಾಡುವಲ್ಲಿ ಮತ್ತು ಸಮರ್ಪಕ ಸ್ಥಳೀಯ ನಾಯಕತ್ವ ಇರುವಲ್ಲಿ ಹೇಗೆ ಸಾಧ್ಯ ಎಂದು ಕಾಣುತ್ತದೆ. ಆದರೆ ಬಹಳ ಹಳ್ಳಿಗಳಲ್ಲಿ (ರಾಷ್ಟ್ರಗಳಲ್ಲಿ) [Country ಎಂದರೆ ಹಳ್ಳಿ ಎಂಬ ಅರ್ಥವೂ ಇದೆ] ಪಂಚಾಯಿತಿಗಳು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿಲ್ಲ ಅಥವಾ ಪಟ್ಟಭದ್ರ ಹಿತಾಸಕ್ತಿಗಳ ಕೈಯಲ್ಲಿ ಸಿಲುಕಿವೆ. ನಿಮ್ಮ ಸಂಪೂರ್ಣ ಯೋಜನೆ ಪಂಚಾಯಿತಿಯನ್ನು ಅವಲಂಬಿಸಿವೆ. ಅದು ಹೇಗೆ ಕೆಲಸ ಮಾಡುತ್ತವೆ ?

ಉತ್ತರ : ಖಂಡಿತಾ ಸರಿ, ಆದರೆ ಸಂಪೂರ್ಣ ಸಾಕ್ಷರತಾ ಆಂದೋಲನಗಳನ್ನು ಪಂಚಾಯಿತಿಗಳು ಕಾರ್ಯರೂಪಕ್ಕೆ ತರದಿದ್ದರೂ ಆಂದೋಲನ ಉತ್ತಮ ಪಂಚಾಯಿತಿಗಳನ್ನಾಗಿ ರೂಪಿಸುವ ಪ್ರಕ್ರಿಯೆಯಾಗಿರುವುದನ್ನು ಗಮನಿಸಬೇಕಾಗುತ್ತದೆ. ಇಂದು ಆಂದೋಲನ ಜಿಲ್ಲಾ ಸಾಕ್ಷರತಾ ಸಮಿತಿ ಅಥವಾ ಭಾರತ ಜ್ಞಾನ ವಿಜ್ಞಾನ ಸಮಿತಿ ಅಥವಾ ಸರ್ಕಾರೇತರ ಸಂಸ್ಥೆಗಳಿಂದ ಆರಂಭಿಸಲ್ಪಟ್ಟಿರಬಹುದು. ಆದರೆ ಪ್ರಕ್ರಿಯೆ ಪ್ರಜ್ಞಾಪೂರ್ವಕವಾಗಿ ಪರಿಣಾಮಕಾರಿ ವಿಕೇಂದ್ರೀಕರಣದತ್ತ ಒಯ್ಯಬೇಕು. ಜನರನ್ನು ಶಕ್ತಿಯುತರನ್ನಾಗಿ ಮಾಡುವುದು ಎಂದರೇನು ? (Empowerment) ಸ್ಥಳೀಯ ಸಂಸ್ಥೆಗಳು ಪರಿಣಾಮಕಾರಿಯಾಗಿ ಕೆಲಸ ಮಾಡಿದರೆ, ಆಂದೋಲನ ಒದಗಿಸಿರುವ ಎಲ್ಲಾ ಸುಧಾರಣೆಗಳು ಜೀವನಪರ್ಯಂತ ಉಪಯೋಗವಾಗುತ್ತವೆ, ಜನರಿಗೆ ತಿಳಿಸಬೇಕು. ಈ ಎಲ್ಲಾ ಕಾರ್ಯಕ್ರಮಗಳು ಈ ಸಂಸ್ಥೆಗಳು ಒಳ್ಳೆಯ ಕೆಲಸ ಮಾಡಲು ಹೇಗೆ ಸಹಕರಿಸುತ್ತವೆ ಎಂಬುದನ್ನು ತಿಳಿಸಬೇಕು. 73 ಮತ್ತು 74ನೇ ಸಂವಿಧಾನ ತಿದ್ದುಪಡಿಗಳು ಅಂಗೀಕರಿಸಲ್ಪಟ್ಟಿವೆ ಎಂಬುದನ್ನು ನೆನಪಿಡಿ, ಜನರ ಹಿತಕ್ಕಾಗಿಯೇ ಇವನ್ನು ಪರಿಣಾಮಕಾರಿಯಾಗಿ ತಿದ್ದುಪಡಿ ಮಾಡಲಾಗಿದೆ ಎಂಬುದನ್ನು ನೋಡಬೇಕು. ಪಂಚಾಯಿತಿ ಮತ್ತು ಪುರಸಭೆಗಳನ್ನು ಕಡಿಮೆ ದರ್ಜೆಗಿಳಿಸಿ ಅವನ್ನು ಒಂದು ಇಲಾಖೆ ಅಥವಾ ಆಡಳಿತದ ಒಂದು

ವಿಭಾಗವಾಗಿ ಮಾಡಲಾಗದು ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಅವು ನಮ್ಮ ದೇಶದಲ್ಲಿ ಆಡಳಿತದ ಆಧಾರಸ್ತಂಭಗಳಂತೆ ಕೆಲಸ ಮಾಡಬೇಕಿದೆ. ಇಂದು ಜನ ವಿಜ್ಞಾನ ಚಳುವಳಿಗಳು ಪ್ರಜ್ಞಾಪೂರ್ವಕವಾಗಿ ಇದು ಸಾಕ್ಷರೋತ್ತರದ ಧ್ಯೇಯವೆಂಬುದನ್ನು ಹೇಳಿಲ್ಲ. ಆದರೆ ನನಗನ್ನಿಸುವಂತೆ ನಾವು ಇವುಗಳಲ್ಲಿ ಅನೇಕ ಕಡೆ ಕೆಲಸಮಾಡಿದ್ದೇವೆ.

## ಪ್ಯಾನೆಲ್ ಸದಸ್ಯ 3 ತೀವ್ರಗಾಮಿ ವಿಮರ್ಶೆ

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**

[ಈ ಅಭಿಪ್ರಾಯಗಳನ್ನು ಯಾವುದೇ ಒಂದು ಸಿದ್ಧಾಂತಕ್ಕೆ ಮಿತಿಗೊಳಿಸಬೇಕಾಗಿಲ್ಲ. ಯಾವುದೇ ಗುಂಪಿಗೂ ಕೂಡ. ನಾವು ಸಾಕಷ್ಟು ಗಮನಿಸಿರುವಂತೆ ಜಿಲ್ಲಾಧಿಕಾರಿಗಳು ಈ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಮತ್ತು ಬಿಜಿವಿಎಸ್ ಜಿಲ್ಲಾಧಿಕಾರಿಗಳ ಅಭಿಪ್ರಾಯವನ್ನು ಪುನರುಚ್ಚರಿಸುವರು. ಹೇಗಾದರೂ ಇರಲಿ, ಬೋರಿಸ್ ಯೆಲ್ಸಿನ್ ನಂತಹವರು ತೀವ್ರವಾದಿಯಾಗಿ ಮತ್ತು ಲೆನಿನ್ ವಾದಿ ಮಂದಗಾಮಿಯಾಗಿ ಇರುವ ತಿರುವುಮುರುವು (ಗೊಂದಲಮಯ) ಪ್ರಪಂಚದಲ್ಲಿ ತೀವ್ರವಾದ ಎಂಬ ಪದಗಳು ತಮ್ಮ ಅರ್ಥ ಕಳೆದುಕೊಳ್ಳುತ್ತವೆ. ಆದರೂ...] ಸರಿಯಾದ ಪರಿಸ್ಥಿತಿ ಅಥವಾ ಸ್ಥಾನದ ಬಗ್ಗೆ ನನಗೆ ಸ್ಪಷ್ಟವಾದ ಅಭಿಪ್ರಾಯವಿದೆ. ಈ ಆಂದೋಲನದಲ್ಲಿ ಜಿಲ್ಲಾಧಿಕಾರಿಗಳ ಪಾತ್ರದ ಬಗ್ಗೆ ನನಗೆ ಅನುಕಂಪವಿದೆ. ಆದರೆ ಸರ್ಕಾರದ ತರ್ಕವನ್ನು (ಜಿಲ್ಲಾಧಿಕಾರಿಗಳ ಕಾರ್ಯಕ್ಷೇತ್ರ ವಿಸ್ತರಿಸುವಲ್ಲಿ) ಸ್ವಲ್ಪಮಟ್ಟಿಗೆ ಒಪ್ಪಬೇಕಾಗುತ್ತದೆ.

ಸರ್ಕಾರ ಸಾಕ್ಷರತೆಯಲ್ಲಿ ಮುಖ್ಯಪಾತ್ರ ವಹಿಸಲು ಕಾರಣ, ಅವರ ಅಭಿವೃದ್ಧಿ ಕಾರ್ಯಕ್ರಮದ ಚಾಲನೆಗೆ ಸಾಕ್ಷರತೆ ಮುಖ್ಯ ಸರ್ಕಾರ ಮೂಲಭೂತ ಶಕ್ತಿಗಳನ್ನು ಒಂದು ಹಂತದವರೆಗೆ ಮಾತ್ರ ಉಪಯೋಗಿಸಬಯಸುತ್ತದೆ. ಈಗ ಸರ್ಕಾರದ ಒಂದು ಕ್ಷೇತ್ರದಲ್ಲಿ ಗುರಿ ಸಾಧಿಸಿದ ಮೇಲೆ ಬೇರೆ ಕ್ಷೇತ್ರಗಳತ್ತಲೂ ಗುರಿಸಾಧನೆಗಾಗಿ ಕೈಹಾಕಿದೆ. ಇದೇ ರೀತಿ ಆಂದೋಲನವನ್ನು ಕುಟುಂಬಕಲ್ಯಾಣ ಕ್ಷೇತ್ರಕ್ಕೂ ಅಳವಡಿಸಲು ಯೋಜಿಸುತ್ತಿದ್ದಾರೆ. ತೀವ್ರವಾದ ಮೂಲಭೂತವಾದವಿಲ್ಲದೆಡೆಯಲ್ಲಿ ಒಂದು ಪ್ರಾಮಾಣಿಕ ಶಕ್ತಿಯಾಗಿ ಬಿಜಿವಿಎಸ್ ವರ್ತಿಸಿ ಸಮರ್ಪಕವಾಗಿ ಗುರಿಯತ್ತ ಸಾಗಲು ಇಡೀ ಪ್ರಕ್ರಿಯೆಗೆ ಯೋಗ್ಯ ಗುತ್ತಿಗೆದಾರನಾಗಬಹುದು. ಹಾಗಾಗಿ ಸರ್ಕಾರದ (ರೋಗಗ್ರಸ್ಥ) ವಿವಾದಾತ್ಮಕ ಅಭಿವೃದ್ಧಿ ಯೋಜನೆಗಳ ವಿರುದ್ಧ ರಾಜಕೀಯ ಜಾಗೃತಿಯನ್ನುಂಟುಮಾಡುವುದರ ಬದಲು ಸಮಾಜ ಕಲ್ಯಾಣ ಯೋಜನೆಗಳ ನಿರ್ವಾಹಕನನ್ನಾಗಿ ಮಾಡಲು ಸರ್ಕಾರ ಸಹಾಯ ಮಾಡಿದೆ. ಜಿಲ್ಲಾಧಿಕಾರಿಗಳ ಈ ರೀತಿಯ ತಿಳುವಳಿಕೆ ನಿಜವಾದರೂ ಒಂದು ನೂರು ಜನರಿಗೆ ಸಹಾಯಮಾಡುವುದನ್ನೇ ಭಾಜಭಜಂತ್ರಿಯಂತೆ ಡಂಗೂರ ಸಾರುತ್ತಾ ಅಭಿವೃದ್ಧಿ ಕಾರ್ಯಕ್ರಮದೊಂದಿಗೆ ಸಾಕ್ಷರೋತ್ತರವನ್ನು ಸಂಯೋಜಿಸುವ ದಳ್ಳಾಳಿಗಳಾಗಿದ್ದಾರೆ. ಆದರೆ ಮೊರೆಯಿಟ್ಟರೂ ಸರ್ಕಾರ ವರ್ಷಕ್ಕೆ ಕೆಲವು ನೂರು ಜನರಿಗೆ ಸಹಾಯ ಮಾಡಿದ್ದಿಲ್ಲ ಮತ್ತು ಸಹಾಯ ಮಾಡಿದ ನಿದರ್ಶನಗಳೂ ಇಲ್ಲ. ಇದು ಆಳುವ ವಲಯಗಳು ನ್ಯಾಯ ಒದಗಿಸುತ್ತೇವೆಂದು ಮೋಸಗೊಳಿಸುವ ಮಾಮೂಲುತಂತ್ರ.

ಆದರೆ ನಾನು ಜನವಿಜ್ಞಾನ ಚಳುವಳಿಗಳ ಸ್ಥಿತಿಗತಿಗಳ ಬಗ್ಗೆ ಹೆಚ್ಚು ಕಳವಳಗೊಂಡಿದ್ದೇನೆ. ಅದರ ಸ್ಥಾನದ ಬಗ್ಗೆ ಸರಿಯಾದ ನಂಬಿಕೆ ಇಲ್ಲ. ಅದು ಭಾರೀನಿರಾಸೆಯ ಕಲ್ಪನಾತೀತ ಸ್ಥಿತಿಯಲ್ಲಿದೆ. ಒಟ್ಟಾರೆ ಪ್ರಚಲಿತ ರಾಜಕೀಯ ಸತ್ಯಕ್ಕೆ ಸಮಂಜಸವಾಗಿಲ್ಲ. ಆಂದೋಲನಗಳ ಸಾಮಾನ್ಯ ಪ್ರಕ್ರಿಯೆಯು ಜನರು ಸ್ವತಃ ನಿರ್ಧಾರ ತೆಗೆದುಕೊಳ್ಳುವತ್ತ ನಿರ್ದೇಶನ ನೀಡಿದರೆ ಅದೊಂದು ಆದರ್ಶ ರಾಷ್ಟ್ರ. ಇಂದಿನ ದೊಡ್ಡ ಅಸಮಾನತೆಯಾದ ಆಸ್ತಿ ಅಸಮಾನತೆಯನ್ನು ವಿಶೇಷವಾಗಿ ನಾವು ಮರೆಯುವಂತೆಯೇ ಇಲ್ಲ. ಆಸ್ತಿ ಪುನರ್ ಹಂಚಿಕೆಯಾಗದೆ ಪರಿಣಾಮಕಾರಿಯಾದ ಸಾಮಾಜಿಕ ಪರಿವರ್ತನೆ ಬರುವುದು ಸಾಧ್ಯವೆ? ಭೂಸುಧಾರಣೆಯಿಲ್ಲದೆ ಕಾರ್ಮಿಕರ ಅಭಿವೃದ್ಧಿಯ ಬಗ್ಗೆ ಮಾತನಾಡಲು ಸಾಧ್ಯವೇ? ಹಪ್ಪಳ, ಉಪ್ಪಿನಕಾಯಿ ಮಾಡುವುದರಿಂದ ಉದ್ಯೋಗ ಸಮಸ್ಯೆ ಪರಿಹಾರವಾದರೂ ಅದು ಕೈಗಾರಿಕಾ ಬೆಳವಣಿಗೆಯ ಸ್ಥಾನ ತುಂಬಬಲ್ಲದೆ? ಪರಿಣಾಮಕಾರಿಯಾದ ಭೂ ಮತ್ತು ಜಲ ನಿರ್ವಹಣೆಯನ್ನು ಮಾಡಬೇಕಾದರೆ ಭೂಮಿಯ ಸಾರಸಂರಕ್ಷಣೆ ಮಾಡಲು ಹೇಗೆ ಯೋಜನೆ ಹಾಕಬಲ್ಲೆ? ಅದು ಭೂಮಿಯಾಗಲಿ, ಬಂಡವಾಳವಾಗಲಿ ಅಥವಾ ಬೇರೆ ಕೈಗಾರಿಕಾ ಆಸ್ತಿಯಾಗಲಿ, ಇದರ ಒಡೆತನ ಕೇವಲ ಕೆಲವರ ಕೈಲಿದೆ. ಅಭಿವೃದ್ಧಿಗೆ ಇದೇ ಮುಖ್ಯ ಅಡಚಣೆ, ಇದನ್ನು ನೀನು ಹೇಗೆ ನಿವಾರಿಸಬಲ್ಲೆ?

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಹಾಗೆಯೇ ನಾವು ಇದನ್ನೂ ನೆನಪಿಟ್ಟುಕೊಳ್ಳಬೇಕು. ನಮ್ಮ ರಾಷ್ಟ್ರ ಉದಾರೀಕರಣದ ಶಕೆಯ ಕಡೆಗೆ ವೇಗವಾಗಿ ಧಾವಿಸುತ್ತಿರುವಾಗ ವಿದೇಶಿ ಕಂಪನಿಗಳು ವಿದೇಶೀ ವಸ್ತುಗಳು ನಮ್ಮ ಮಾರುಕಟ್ಟೆಗೆ ಹರಿದು ಬರುತ್ತಿರುವಾಗ ನಮ್ಮ ಆದಾಯ ತರುವ ಯೋಜನೆಗಳಿಗೆ ಯಾವ ಅವಕಾಶವಿದೆ? ಒಬ್ಬ ನವಸಾಕ್ಷರ ಮಹಿಳೆ ಪೆಪ್ಸಿ ಫುಡ್ಸ್ ಜೊತೆ ಸ್ಪರ್ಧಿಸಲು ಆಲೂಗಡ್ಡೆ ಉಪ್ಪೇರಿ ತಯಾರಿಸಿದರೆ ಯಶಸ್ವಿಯಾಗುತ್ತಾಳೆಯೇ? ದಕ್ಷಿಣ ಕನ್ನಡದಲ್ಲಿ ಮಹಿಳೆಯರಿಗೆ ಸೋಪು ತಯಾರಿಸಲು ಕೊಟ್ಟ ತರಬೇತಿಯ ಬಗ್ಗೆ ನೆನೆದರೆ ದುಃಖವಾಗುತ್ತದೆ. ಅವರಿಗೆ ಹಿಂದೂಸ್ತಾನ್ ಲೀವರ್ ಸಂಸ್ಥೆಯ ಎದುರು ಸ್ಪರ್ಧಿಸಲು ಯಾವ ಅವಕಾಶವಿದೆ? ರೇಷ್ಮೆ ಕೈಗಾರಿಕೆಯ ಉದಾಹರಣೆ ತೆಗೆದುಕೊಂಡರೆ, ಒಂದು ಪ್ರದೇಶದಲ್ಲಿ ಅನೇಕ ಸರ್ಕಾರೇತರ ವ್ಯಕ್ತಿಗಳು ಸಾವಿರಾರು ರೈತರಿಗೆ ರೇಷ್ಮೆ ಕೈಗಾರಿಕೆಯ ಬಗ್ಗೆ ತರಬೇತಿ ನೀಡಿದರು. ರೇಷ್ಮೆಗೂಡು ಮತ್ತು ಕಚ್ಚಾರೇಷ್ಮೆ ಆಮದು ಪ್ರಾರಂಭವಾದಮೇಲೆ ಇಡೀ ರೇಷ್ಮೆ ಕೈಗಾರಿಕೆಯ ಬುಡಕ್ಕೆ ಕೊಡಲಿ ಪೆಟ್ಟು ಬಿತ್ತು. ರೇಷ್ಮೆ ಕೈಗಾರಿಕೆಯನ್ನೇ ತಮ್ಮ ಕಸುಬು ಮಾಡಿಕೊಂಡಿದ್ದ ನವಸಾಕ್ಷರರು ಮತ್ತು ಬಡರೈತರು ಪಾತಾಳಕ್ಕೆ ಬಿದ್ದರು. ಅಲ್ಲಲ್ಲಿ ಕೆಲವು ನೂರು ಜನ ಚರ್ಮ ಹದಮಾಡುವುದನ್ನು ಗುಡಿಕೈಗಾರಿಕೆಯ ಭಾಗವಾಗಿ ನಿರ್ವಹಿಸುತ್ತಿದ್ದರು. ಆದರೆ ದೊಡ್ಡದಾಗಿ ಬೆಳೆದ ವ್ಯವಸ್ಥಿತ ಚರ್ಮಮಾರುಕಟ್ಟೆಯ ಎದುರು ಅವರಿಗೆ ಸಿಗುವ ಅವಕಾಶವೆಂತಹುದು?

ಪ್ರಶ್ನೆ : ಸಾಕ್ಷರೋತ್ತರ ಕಾರ್ಯಕ್ರಮದೊಂದಿಗೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜೊತೆಗೂಡಿಸುವುದರಲ್ಲಿ ನಿಮ್ಮ ಸಲಹೆ ಏನು?

ಉತ್ತರ : ನನ್ನ ಅಭಿಪ್ರಾಯದಂತೆ ಸಾಕ್ಷರೋತ್ತರ ಕಾರ್ಯಕ್ರಮ ಹೆಚ್ಚಾಗಿ ಶೈಕ್ಷಣಿಕ ಪ್ರಕ್ರಿಯೆಗೇ ಸೀಮಿತವಾಗಿರಬೇಕು. ಅದರ ಜೊತೆ ಕೇಂದ್ರ ಸಾಮಾಜಿಕ

ಕಲ್ಯಾಣ ಕ್ಷೇತ್ರವಾದ ಆರೋಗ್ಯ, ಪ್ರಾಥಮಿಕ ಶಿಕ್ಷಣ, ಕುಡಿಯುವ ನೀರು, ನೈರ್ಮಲ್ಯ ಮುಂತಾದುವನ್ನು ಬೇಕಾದರೆ ಜೋಡಿಸಬಹುದು. ಇದರಲ್ಲೂ ಕೆಲವು ಅಪವಾದಗಳಿರುತ್ತವೆ.[ವಿಶೇಷವಾಗಿ ವಿಶ್ವಬ್ಯಾಂಕ್, ಐಎಂಎಫ್, ಇವುಗಳಲ್ಲಿ ತುಂಬಾ ಸಕ್ರಿಯವಾಗಿರುವುದರ ಕಾರಣ ಭಯಪಡಲು ಕಾರಣವಿದೆ. ಇದು ಕೇವಲ ವಚನಬದ್ಧತೆ ಮತ್ತು ಜವಾಬ್ದಾರಿಗಳನ್ನು ಪೂರೈಸದಂತೆ ಆರ್ಥಿಕ ದಿಗ್ಬಂಧನದಿಂದ ಸರ್ಕಾರವನ್ನು ಕಟ್ಟಿಹಾಕುವ ಸುಲಭ ಮಾರ್ಗ] ಖಂಡಿತವಾಗಿ ಸಾಕ್ಷರೋತ್ತರ ಕಾರ್ಯಕ್ರಮವೊಂದೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜನರ ಬಳಿ ತೆಗೆದುಕೊಂಡು ಹೋಗಲು ಶಕ್ತವಾಗಲಾರದು. ರಾಜಕೀಯ ಪ್ರಕ್ರಿಯೆಯ ಭಾಗವಾಗಿ ಜನಗಳನ್ನು ಜಾಗೃತಗೊಳಿಸುವುದನ್ನು ಬಿಟ್ಟರೆ ಆಳುವ ಜನರ ನೀತಿಗಳು, ಜನರು ಕೈಗೆ ಶಕ್ತಿ ತೆಗೆದುಕೊಂಡು ಬದಲಾವಣೆಗೆ ಬೇಕಾದ ಎಲ್ಲಾ ಶಕ್ತಿಯನ್ನು ಕೊಡಲು ಸಹಕರಿಸಬಹುದು. ಇಂತಹ ಬದಲಾವಣೆಗೆ ಸಂಪೂರ್ಣ ಸಾಕ್ಷರತಾ ಆಂದೋಲನ ಅಥವಾ ಅಂತಹುದೇ ಬೇರೆ ಆಂದೋಲನ ಚಾಲನೆ ನೀಡುತ್ತದೆ ಎಂದು ಸಲಹೆ ಮಾಡುವುದು ಅರ್ಥರಹಿತವಾದದ್ದು. ಈ ಕಾರ್ಯಕ್ರಮ ಸರ್ಕಾರದ ಹಣದಿಂದ ನಡೆದು ಸರ್ಕಾರಿ ಅಧಿಕಾರಿಗಳು ಒಂದು ಮಿತಿಯುಳ್ಳ ಸರ್ಕಾರದ ಧ್ಯೇಯಕ್ಕಾಗಿ ಕೆಲಸ ಮಾಡುವ ಕಾರ್ಯಕ್ರಮ ಈ ಸಾಕ್ಷರತಾ ಆಂದೋಲನ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಪ್ರಶ್ನೆ : ಹಾಗಾದರೆ ನೀವು ಸಾಕ್ಷರತಾ ಆಂದೋಲನದ ವಿರೋಧಿಗಳೆ ?

ಉತ್ತರ : ಇಲ್ಲ, ಖಂಡಿತಾ ಇಲ್ಲ, ಆಂದೋಲನ ಜನರ ಗೊಂದಲಮಯ ಅಭಿಪ್ರಾಯಗಳನ್ನು ಪ್ರತಿನಿಧಿಸಿದರೂ ಅದು ಜನರಿಗೆ ತಮ್ಮ ಪ್ರಪಂಚವನ್ನು ಅರ್ಥ ಮಾಡಿಕೊಳ್ಳಲು ಮತ್ತು ತಮ್ಮ ಶೋಷಣೆಯ ಕಾರಣಗಳನ್ನು ತಿಳಿಯಲು ಸಹಕರಿಸುತ್ತದೆ. ಮೂಲತತ್ವ (ಧ್ಯೇಯೋದ್ದೇಶ) ಬಿತ್ತಲು ಅದು ಕ್ಷೇತ್ರವನ್ನು ಫಲವತ್ತಾಗಿ ಮಾಡುತ್ತದೆ. ಅಂತಹ ಆಮೂಲಾಗ್ರ ಬದಲಾವಣೆಯನ್ನು ತರುವ ಪ್ರಕ್ರಿಯೆಯೇ ಬೇರೆ. ಅದು ಸಾಕ್ಷರತೆ ಲ್ಲದೆ ಬೇರೆ ಕೆಲವು ಅಂಶಗಳನ್ನು ಅವಲಂಬಿಸಿದೆ. ಒಂದು ವೇಳೆ ಮೂಲತತ್ವಗಳನ್ನು ಒಪ್ಪದ ಮನಸ್ಸುಳ್ಳ ಜನರನ್ನು ಈ ಆಂದೋಲನದಲ್ಲಿ ತೊಡಗಿಸಿದರೆ, ಅವರು ತಮ್ಮ ಪ್ರಭಾವವನ್ನು ಬೆಳೆಸಿಕೊಂಡು ಮುಂದಿನ ರಾಜಕೀಯವಾದ ಕೆಲಸಗಳಿಗೆ ಉಪಯೋಗಿಸಿದರೆ ತುಂಬಾ ಒಳ್ಳೆಯದು. ಆದರೆ ನಾನು ಪುನರುಚ್ಛರಿಸುವುದೇನೆಂದರೆ, ಅಭಿವೃದ್ಧಿ ಯಾವಾಗಲೂ ರಾಜಕೀಯ ಪ್ರಕ್ರಿಯೆಯ ಹೊರಗೆ ಬೆಳೆಯುತ್ತದೆಯೋ ಹೊರತು, ಇಂತಹ ಆಂದೋಲನಗಳ ಹೊರಗೆ ಬೆಳೆಯುವುದಿಲ್ಲ.

ಪ್ರಶ್ನೆ : ಹಾಗಾದರೆ ನೀನು ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಾಕ್ಷರೋತ್ತರ ಕಾರ್ಯಕ್ರಮದೊಂದಿಗೆ ಜೋಡಿಸುವುದನ್ನು ವಿರೋಧಿಸುತ್ತೀಯ ?

ಉತ್ತರ : ಹಾಗೇನಿಲ್ಲ, ಉದಾಹರಣೆಗೆ ಒಬ್ಬ ಆಸಕ್ತ ಜಿಲ್ಲಾಧಿಕಾರಿ. ಕೆಲವು ಯೋಜನೆಗಳಲ್ಲಿ ಉದಾ: JRY, DWACRA ಇತ್ಯಾದಿ ಸರ್ಕಾರದ ಗುರಿಸಾಧಿಸಲು ಇದನ್ನು ಪ್ರಾಮಾಣಿಕವಾಗಿ ಉಪಯೋಗಿಸಿಕೊಳ್ಳಬಹುದು. ಮತ್ತು ಸರ್ಕಾರೇತರ ಸಂಸ್ಥೆ ಈ ಅವಕಾಶವನ್ನು ಚೆನ್ನಾಗಿ ಉಪಯೋಗಿಸಿಕೊಂಡು ಪರ್ಯಾಯವಾದ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಯೋಚಿಸಬಹುದು. ಅದು ಅತ್ಯಂತ ಕೆಳಹಂತದಲ್ಲಿದ್ದರೂ ರಾಜಕೀಯ ಕಾರ್ಯಕರ್ತರ ವಾಗ್ಬಾಣಗಳಿಗೆ ಉಪಯುಕ್ತ ಸಮರ್ಥನೆಯನ್ನು ಒದಗಿಸಿಕೊಟ್ಟಂತೆಯೂ ಆಗುತ್ತದೆ.

ಇಂತಹ ನೀತಿಗಳನ್ನು ಕಾರ್ಯರೂಪಕ್ಕೆ ತರುವಾಗ ಕೆಲವು ಬದ್ಧತೆ ಇರುವ ಕಾರ್ಯಕರ್ತರನ್ನು ನೇಮಿಸಿಕೊಂಡು ಅವರಿಗೆ ಆರ್ಥಿಕ ಸಹಾಯವನ್ನೂ ನೀಡಬೇಕಾಗುತ್ತದೆ. ಇದೂ ಒಂದು ರೀತಿಯ ಸೇವೆಯೇ.ಇದೆಲ್ಲವೂ ಕೂಡ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಯ ಮುಖ್ಯ ಪ್ರಕ್ರಿಯೆಗಿಂತ ಭಿನ್ನ ಎಂದು ತಿಳಿದುಕೊಂಡಿರುವವರೆಗೂ ನನಗೂ ಅವರಿಗೂ ಜಗಳವೇನೂ ಆಗದು.



## ಜಿಲ್ಲಾಧಿಕಾರಿಯವರ ಪ್ರತ್ಯುಕ್ತಿ

ನಾನು ಏನೂ ಮಾತನಾಡದೆ ನನ್ನ ಸ್ನೇಹಿತನಿಗಾಗಿ ಒಂದು ಪದವನ್ನೂ ಖರ್ಚು ಮಾಡದೆ ಸುಮ್ಮನಿರುತ್ತೇನೆ. ಅವನು ಮಾತನಾಡುತ್ತಿರುವ ರೀತಿಯ ರಾಜಕೀಯ ಬದಲಾವಣೆ ಇದು ಕಾರ್ಯಕ್ರಮ ಪಟ್ಟಿಯಲ್ಲೂ ಇಲ್ಲ. ರಷ್ಯಾದೇಶಕ್ಕಾದ ಗತಿಯೇನು ಗಮನಿಸಿ. ಬಹುಶಃ ಅವನಿಗೆ ಇವತ್ತು ಚೀನಾದ ಸ್ಥಿತಿ ಏನು ಎಂದು ತಿಳಿದಿರಲಾರದು. ನನ್ನ ಜನ ವಿಜ್ಞಾನ ಚಳುವಳಿಯ ಸ್ನೇಹಿತನಿಗೆ ನಾನು ಇಷ್ಟೇ ಹೇಳಲು ಇರುವುದು ಅಗಾಧವಾದ ಅನಿಶ್ಚಿತ ಆಸೆಗಳಿಟ್ಟುಕೊಂಡಿರುವುದಕ್ಕಿಂತಲೂ ಕೆಲವೇ ಕೆಲವು ಅನುಕೂಲ ಪಡೆಯುವುದು ತುಂಬಾ ಒಳ್ಳೆಯದು. ಇದಲ್ಲದೆ ಪಂಚಾಯತಿಯ ಬಗ್ಗೆ ಯಾವ ಭರವಸೆಯೂ ಇಲ್ಲ ಮತ್ತು ಗ್ರಾಮಸಮಿತಿಗಳು ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲೂ ಸಹ ನಿಜವಾಗಿ ಕೆಲಸ ಮಾಡುವುದಿಲ್ಲ. ಕಾರ್ಯನಿರ್ವಹಣೆಗೆ ನಾವು ಯಾವಾಗಲೂ ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಗುರುತಿಸಲ್ಪಟ್ಟ ಪ್ರೇರಣೆ ಹೊಂದಿದ ಜಿಲ್ಲಾ ತಂಡದಿಂದ ಸಹಾಯ ಪಡೆಯುತ್ತಿರುವ ಜಿಲ್ಲಾಡಳಿತರನ್ನು ಅವಲಂಬಿಸಬೇಕಾಗುತ್ತದೆ. ಹಾಗಾದಾಗ ಮಾತ್ರ ಕಲಿಕಾ ಸಾಮಗ್ರಿ ಮತ್ತು ವಿಷಯಕವನ್ನು ಜನರಿಗೆ ತಲುಪಿಸಲು ಸಹಾಯವಾಗುತ್ತದೆ. ನಾವು ತುಂಬಾ ಜಾಗರೂಕತೆಯಿಂದ ರಾಜಕೀಯ ಮತ್ತು ರಾಜಕೀಯ ವ್ಯಕ್ತಿಗಳನ್ನು ಆಂದೋಲನದಿಂದ ಹೊರಗಿಡಬೇಕು. ಹಾಗಿಲ್ಲದಿದ್ದರೆ ಮುಂದೆ ಸರ್ಕಾರಿ ಸಂಬಂಧದ ವಿಷಯಗಳಲ್ಲಿ ಕೆಲವೇ ವ್ಯಕ್ತಿಗಳನ್ನು ಅಪಾಯಕ್ಕೆ ಸಿಕ್ಕಿಸುತ್ತಾರೆ. ಅವರಿಗೆ ನನ್ನ ಅಂತಿಮ ಸಲಹೆ ಎಂದರೆ ಎಲ್ಲವನ್ನೂ ಮಾಡುತ್ತೇನೆಂದು ಹೋಗಿ ವಿಫಲರಾಗಬೇಡ ಕೆಲವು ನಿರ್ದಿಷ್ಟವಾದ ವಿಷಯಗಳನ್ನು ಆರಿಸಿಕೊಂಡು ಯತ್ನಿಸಿ ಅದರಲ್ಲಿ ಯಶಸ್ವಿಯಾಗು.

## ಜನವಿಜ್ಞಾನ ಚಳುವಳಿಯ ಪ್ರತ್ಯುಕ್ತಿ

ನಾವು ನಮ್ಮ ಆದಾಯ ತರುವ ಯೋಜನೆಗಳಲ್ಲಿ ಕೆಲಸ ಮಾಡಲು ನನ್ನದೇನು ಅಭ್ಯಂತರ ಇಲ್ಲ. ಇದು ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಭಾರತ ಜ್ಞಾನ ವಿಜ್ಞಾನ ಸಮಿತಿಯಂತಹ ಸಂಘಟನೆಯ ಸಾಮರ್ಥ್ಯವನ್ನು ಹೆಚ್ಚಿಸುವಂತ ಪ್ರಕ್ರಿಯೆಯಾಗಿ ನೋಡಿದಾಗ ಮಾತ್ರ ಒಪ್ಪುತ್ತೇನೆ. ಒಬ್ಬ ಕೈಗಾರಿಕೋದ್ಯಮಿಗೆ ಬೇಕಾದ ಸಾಮರ್ಥ್ಯ ಬರುವುದು ಕೆಲಸ ಮಾಡಿದ ಅನುಭವದಿಂದ ಮಾತ್ರ ಮತ್ತು ಜನರಿಗೆ ಈ ಸಾಮರ್ಥ್ಯ ಬರುವುದು ತುಂಬಾ ಮುಖ್ಯ. ಹೇಗಾದರೂ ಆಗಲಿ ನನ್ನ ಮೂಲಭೂತವಾದಿ ಸ್ನೇಹಿತನೊಂದಿಗೆ ನನಗೆ ಈ ವಿಷಯದಲ್ಲಿ ಸಹಮತ ಇದೆ. ಏನೆಂದರೆ ತಂತಾನೇ ಅಭಿವೃದ್ಧಿಯ ಮೇಲೆ ಯಾವ ಪರಿಣಾಮವನ್ನೂ ಬೀರಲಾರದು. ಇವು ನಾನು ನನ್ನ ಸ್ನೇಹಿತನಿಗೆ ಹಾಕುವ ಮೂರು ಪ್ರಶ್ನೆಗಳು.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಎ) ಸಾಕ್ಷರತಾ ಆಂದೋಲನದಲ್ಲಿ ಜನರನ್ನು ಸಂಘಟಿಸುವುದು (ಕೇವಲ ಅವರ ಮೇಲೆ ಹೇರುವುದಲ್ಲ, ಅವರನ್ನು ಕಲಿಯುವ ಮತ್ತು ಕಲಿಸುವ ಪ್ರಕ್ರಿಯೆಯಲ್ಲಿ ತೊಡಗಿಸುವುದು) ಜನರನ್ನು ರಾಜಕೀಯವಾಗಿ ಜಾಗೃತಗೊಳಿಸಲು ಇದು ಸತ್ಯಯುತ ವಿಧಾನವಲ್ಲವೆ? ಅಥವಾ ರಾಜಕೀಯ ಜಾಗೃತಿ ಎಂಬ ಪದ ಕೇವಲ ಚಳುವಳಿ, ಮುಷ್ಕರ ಅಥವಾ ವಿರೋಧ ವ್ಯಕ್ತಪಡಿಸುವ ರೀತಿಗೆ ಮೀಸಲಾಗಿರಬೇಕೆ? ಇಂತಹ ಜಾಗೃತಿಯನ್ನು ಸರ್ಕಾರದ ಹಣದ ಸಹಾಯವಿಲ್ಲದೆ, ಸಂಪೂರ್ಣ ಸಾಕ್ಷರತಾ ಆಂದೋಲನ ಮತ್ತು ಸಾಕ್ಷರೋತ್ತರ ಕಾರ್ಯಕ್ರಮದಿಂದಲೇ ಈ ತೀವ್ರಗಾಮಿ ಶಕ್ತಿಗಳ ಸಹಾಯದಿಂದ ಮೂಡಿಸಲು ಸಾಧ್ಯವಾಗುವುದಿಲ್ಲವೆ? (ಇಂದು ಕಾಣುತ್ತಿರುವ ರಾಜಕೀಯ ಜಾಗೃತಿ ಮೂಡುವ ಎಲ್ಲಾ ವಿಧಾನ, ಎಲ್ಲಾ ಬದಲಾವಣೆಗಳನ್ನು ತರಲು ಸಾಕು ಎಂದಾದರೆ ನಾನು ಮತ್ತೆ ಏನೂ ಹೇಳುವುದಿಲ್ಲ. ಆದರೆ ಸ್ಪಷ್ಟವಾಗಿ ಹೇಳುವುದಾದರೆ ವಿಶೇಷವಾಗಿ ಹಿಂದಿ ಮಾತನಾಡುವ ಹಿಂದುಳಿದ ದೊಡ್ಡ ಪ್ರದೇಶಗಳಲ್ಲಿ ಇದು ಹಾಗಾಗುವುದಿಲ್ಲ)

ಬಿ) ಇದೇ ರಾಜಕೀಯ ಪ್ರಕ್ರಿಯೆಯನ್ನು ಸರ್ಕಾರಿ ನೀತಿಗಳನ್ನು ವಿರೋಧಿಸುವ ಮತ್ತು ರಾಜಕೀಯ ಅಧಿಕಾರವನ್ನು ಸ್ವಾಧೀನ ಪಡಿಸಿಕೊಳ್ಳುವಂತಹ ಹಂತ ತಲುಪಬೇಕೆ? ಎಂಬುದನ್ನು ನಾವು ನೋಡಬೇಕಾಗುತ್ತದೆ. ಆಗ ಮಾತ್ರ ನಾವು ಸಾಕ್ಷರತೆಯ ನಿಜವಾದ ಧ್ಯೇಯಗಳಾದ ಶಿಕ್ಷಣ, ಆರೋಗ್ಯ, ಅಭಿವೃದ್ಧಿ ಮುಂತಾದವುಗಳನ್ನು ಕೈಗೆತ್ತಿಕೊಳ್ಳಬಹುದು. ಪಟ್ಟಭದ್ರ ಹಿತಾಸಕ್ತಿಗಳು ರಾಜಕೀಯ ಅಧಿಕಾರ ಮಾತ್ರವಲ್ಲದೆ ಸಂಘಟನಾ ಸ್ವರೂಪದಲ್ಲೂ ಶೈಕ್ಷಣಿಕ, ಆರೋಗ್ಯ ವಿಷಯಗಳಲ್ಲಿ, ಕಲ್ಯಾಣ ಯೋಜನೆಗಳಲ್ಲಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮತ್ತು ಅಭಿವೃದ್ಧಿ ಪರಿಕಲ್ಪನೆಗಳಲ್ಲಿ ಸಾರ್ವಭೌಮತ್ವವನ್ನು ಸಾಧಿಸುವುದನ್ನೂ ನಾವು ನೋಡುತ್ತೇವೆ.

ಒಂದು ವೇಳೆ ಇದು ಸರಿ ಎನ್ನುವುದಾದರೆ ಇಂತಹ ಯಾವುದೇ ಕ್ಷೇತ್ರದಲ್ಲಿ ಸಾಧಿಸಿದ ಬದಲಾವಣೆ, ರಾಜಕೀಯ ಬದಲಾವಣೆಗೆ ವಿಶಿಷ್ಟ ಕಾಣಿಕೆ ನೀಡಲಾರದೆ? ಇಂತಹುದರಲ್ಲಿ ನನ್ನ ಮೂಲಭೂತವಾದ ಒಪ್ಪುವ ಸ್ನೇಹಿತನ ಸ್ಥಿತಿ ತುಂಬಾ ಆರಾಮಾದುದು, ಏಕೆಂದರೆ ಇಲ್ಲಿ ಅವನಿಗೆ ಸರ್ಕಾರವನ್ನು ಬೆಳಕಿಗೆ ತರುವುದೊಂದೇ ಕೆಲಸ, ಆದರೆ ಇದು ನಮ್ಮನ್ನು

ನಿಜವಾಗಿ ಎಲ್ಲಾ ಕ್ಷೇತ್ರದ ಕೆಲಸದಲ್ಲಿ ತೊಡಗಿಸಲು ಕರೆ ಕೊಡುತ್ತದೆ. ಆದರೆ ಅಂತಹ ಬದಲಾವಣೆಗೆ ಬೇಕಾದ ಅಗಾಧ ಸಹಮತ ಈ ರೀತಿಯ ತೊಡಗುವಿಕೆ ಇಲ್ಲದೆ ಸಿಗುತ್ತದೆಯೆ ?

ಕೊನೆಯದಾಗಿ ನಾನು ಸ್ಪಷ್ಟಪಡಿಸಬೇಕಾಗಿರುವುದು ಏನೆಂದರೆ ಕೇವಲ ಯಾವುದೋ ಅವಕಾಶ ಸಿಕ್ಕ ಮಾತ್ರ ಅಂತಹ ಆಂದೋಲನಗಳು ನಿಜವಾಗಿ ಸ್ಥಳೀಯ ಸ್ವಯಂ ಆಡಳಿತವನ್ನು ಜನರಿಗೆ ಕೊಡುತ್ತದೆಂದು ನನ್ನ ಅಭಿಪ್ರಾಯವಲ್ಲ. ಒಂದೇ ರಾಜಕೀಯ ಪ್ರಕ್ರಿಯೆ, ಸಾಮಾಜಿಕ ಸುಧಾರಣೆ ತರುವ ಏಕೈಕ ಪ್ರಕ್ರಿಯೆಯಾಗಬಲ್ಲುದು. ಇಲ್ಲವೇ ಇಲ್ಲ. ಆದರೆ ಈ ಸ್ಥಳೀಯ ಸ್ವಯಂ ಆಡಳಿತ ರಾಜಕೀಯದ ಒಂದು ಅಂಗವಲ್ಲ. ಈ ಆಂದೋಲನಗಳೊಂದಿಗೆ ಸರಳವಾಗಿ ಜೋಡಿಸಬಹುದಾದ ಪ್ರಕ್ರಿಯೆ. ಇದನ್ನು ಸಾಧಿಸಬೇಕಾದರೆ ನಾವು ಹೆಚ್ಚು ಗಮನದಲ್ಲಿಟ್ಟುಕೊಳ್ಳಬೇಕಾದುದು ನಾವು ಪಟ್ಟಭದ್ರ ಹಿತಾಸಕ್ತಿಗಳೊಡನೆ ಹೋರಾಡಬೇಕಾಗುತ್ತದೆ. ಮತ್ತು ಈ ಬಗ್ಗೆ ಜನರಿಗೆ ಶಿಕ್ಷಣ ನೀಡಬೇಕಾಗುತ್ತದೆ. ಸ್ವತಃ ಶಾಸನಗಳನ್ನು ಮಾಡುವ ಮತ್ತು ರಾಜಕೀಯ ಗ್ರಹಿಕೆ ಇರುವ ಪ್ರಜ್ಞಾವಂತ ಜನರ ಪ್ರಭಾವದಿಂದ ದೊಡ್ಡ ಸವಾಲುಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯ ಸೃಷ್ಟಿಯಾಗುತ್ತದೆ. ರಾಜ್ಯ ಮತ್ತು ರಾಷ್ಟ್ರದ ಯೋಜನೆಯೂ ಕೂಡ ಅಗತ್ಯವಾಗಿ ಜನರ ಬೇಡಿಕೆಗಳಿಗೆ ಸ್ಪಂದಿಸಬೇಕು ಮತ್ತು ಅಂತಹ ಸ್ಥಳೀಯ ಆಡಳಿತ ಅಸ್ತಿತ್ವಕ್ಕೆ ಬಂದರೆ ಅದು ಗಮನಾರ್ಹ ಬದಲಾವಣೆಯಾಗಬೇಕು.



## ತೀವ್ರಗಾಮಿಯ ಪ್ರತ್ಯುಕ್ತಿ

### ಕೇವಲ ಎರಡು ತಕ್ಷಣದ ಷರಾಗಳು

ಎ) ಇಂದಿನ ದಿನಗಳಲ್ಲಿ ಪ್ರಗತಿಪರವಾದ ಶಕ್ತಿಗಳು (ಜನವಿಜ್ಞಾನ ಚಳುವಳಿಗಿಂತ ದುರ್ಬಲವಾದವುಗಳು) ಈ ಎಲ್ಲಾ ಕ್ಷೇತ್ರಗಳಲ್ಲಿ ಪಾಲ್ಗೊಳ್ಳುವ ಶಕ್ತಿಯನ್ನು ಪಡೆದಿಲ್ಲ. ಇದಕ್ಕೆ ಕೇರಳ ಒಂದು ಅಪವಾದ. ಬಹಳಷ್ಟು ರಾಜ್ಯಗಳಲ್ಲಿ ಯಾರೇ ಆದರೂ ಜನ ಜಾಗ್ರತಿಗಾಗಿ ವಿರೋಧಿ ವೇದಿಕೆಯನ್ನು ಆರಿಸಿಕೊಂಡರೂ, ರಚನಾತ್ಮಕ ಎನ್ನಬಹುದಾದ ಕೆಲಸವಾಗುವುದು ಸಾಮಾನ್ಯವಾಗಿ ಸರ್ಕಾರದ ಸಹಾಯದಿಂದಲೇ ಇವೆರೆಡಕ್ಕೂ ಇಂದಿಗೂ ಸಾಕಷ್ಟು ಕಾರ್ಯಕರ್ತರಿಲ್ಲ.

ಬಿ) ತೀವ್ರವಾದ ನಂಬುವವನ ಜಾಗ್ರತಿ ನಿರ್ಮಾಣ ಕಾರ್ಯಕ್ಕೆ ಸಹಕಾರಿ ಎಂಬುದಕ್ಕೆ ಮೊದಲ ಆದ್ಯತೆ ಆದರೂ ಅಂತಹ ಚಟುವಟಿಕೆ ಸಾಮಾಜಿಕ ಬದಲಾವಣೆ ತರಲು ಪರಿಣಾಮಕಾರಿಯಾದೀತೆಂದು ನಾವು ತಿಳಿದುಕೊಳ್ಳಬೇಕು. ಸ್ಥಳೀಯ ಆಡಳಿತ ಅಥವಾ ಪಂಚಾಯಿತಿ ಬದಲಾವಣೆ ತರಲು ಪ್ರಭಾವ ಬೀರಿರುವ ಉದಾಹರಣೆಗಳ ಬಗ್ಗೆ ನನಗೆ ತಿಳಿಯದು. ಅಂತಹ ಮಾದರಿ ಅಥವಾ ಉದಾಹರಣೆಗಳಿಲ್ಲದೆ ಅಥವಾ ದೃಷ್ಟಾಂತಗಳಿಲ್ಲದೆ ಯಾರು ತಾನೆ ಅಂತಹ ಒಪ್ಪಂದ(ಬದ್ಧತೆ) ಮಾಡಿಕೊಳ್ಳಬಯಸುತ್ತಾರೆ.

## ಸಂಪಾದಕರ ಟಿಪ್ಪಣಿ

ಮೂರು ಜನ ಸದಸ್ಯರ ಹೆಸರುಗಳನ್ನು ಕೋರಿಕೆಯ ಮೇರೆಗೆ ಬಹಿರಂಗಪಡಿಸಲಾಗಿಲ್ಲ. ಇದರಿಂದ ಇದು ಯಾರೋ ಒಬ್ಬ ವ್ಯಕ್ತಿಯ ವಿಷಯವಾಗಿ ಪರಿಣಮಿಸುವುದನ್ನು ತಡೆಯಲಾಗಿದೆ. ಆದರೂ ನಾವು ಒಂದನ್ನು ಸ್ಪಷ್ಟಪಡಿಸಬೇಕಾಗಿದೆ. ಏನೆಂದರೆ ಎದುರುತ್ತರ ಪ್ರಕಟಿಸಿರುವುದು ಸಂಪೂರ್ಣವಾಗಿಲ್ಲ. ಏಕೆಂದರೆ ಅದನ್ನು ಸಂಕ್ಷಿಪ್ತಗೊಳಿಸಲು ಪರಿಷ್ಕರಿಸಲಾಗಿದೆ. ಇದರ ಜೊತೆಗೆ ಒಳಗೊಂಡ ವಿಷಯ ಈ ಚರ್ಚೆಯ ವ್ಯಾಪ್ತಿಯನ್ನು ಮೀರಿಹೋಗಿದ್ದುದರಿಂದ ಮತ್ತು ಅದು ಸಾಕ್ಷರೋತ್ತರ ಅಥವಾ ಸಂಪೂರ್ಣ ಸಾಕ್ಷರತಾ ಆಂದೋಲನದ ನಂತರದ ಪರಿಸ್ಥಿತಿಗೆ ಮಾತ್ರ ಮಿತಿಗೊಂಡಿದ್ದರಿಂದ ಹಾಗೆ ಮಾಡಲಾಗಿದೆ.



ಚರ್ಚೆ 8

# ಒಂದು ಜಿಲ್ಲೆಯನ್ನು 100% ಸಾಕ್ಷರೋತ್ತರತೆ ಯನ್ನು ಸಾಧಿಸಿದ ಜಿಲ್ಲೆ ಎಂದು ಘೋಷಿಸುವುದು ?

## (ಅಥವಾ ಸಾಕ್ಷರೋತ್ತರ ಕಾರ್ಯಕ್ರಮವನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಮೌಲ್ಯಮಾಪನ ಮಾಡುವುದು ಹೇಗೆ ?

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**

ಇದರಲ್ಲಿ ಒಳಗೊಂಡ ಕೆಲವು ಮುಖ್ಯ ವಿಷಯಗಳ ಪರಿಚಯ (Issues)

ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಸಾಕ್ಷರತಾ ಆಂದೋಲನದಲ್ಲಿ ಮುಖ್ಯ ಪಾತ್ರ ವಹಿಸಿವೆ. ಎಲ್ಲರ ಗುರಿ ಏನೆಂದರೆ ಒಂದು ನಿರ್ದಿಷ್ಟ ದಿನಾಂಕದಂದು ಒಂದು ಜಿಲ್ಲೆಯನ್ನು ಸಂಪೂರ್ಣ ಸಾಕ್ಷರ ಜಿಲ್ಲೆ ಎಂದು ಘೋಷಿಸುವುದು ಅದಕ್ಕಿಂತ ಮೊದಲು ಆಂತರಿಕ ಮತ್ತು ಬಾಹ್ಯ ಮೌಲ್ಯಮಾಪನ ವಿಧಾನಗಳಿಂದ ಜಿಲ್ಲೆಯಲ್ಲಿ ಮೌಲ್ಯಮಾಪನ ನಡೆಯಬೇಕು.

ಈಗ ನಾವು ಯಾವುದೇ ಪ್ರದೇಶವನ್ನು ಸಂಪೂರ್ಣವಾಗಿ ಸಾಕ್ಷರತೆ ಸಾಧಿಸಿದೆ ಎಂದು ಸಾರುವುದು ಅಪಾಯ ಎಂಬುದನ್ನು ಅರಿತಿದ್ದೇವೆ. ಅಲ್ಲದೆ ಎಲ್ಲಾ ಜಿಲ್ಲೆಗಳಿಗೂ ಹಾಗೆ ಮಾಡದಿರಲು ಸಲಹೆ ಮಾಡಲಾಗಿದೆ. ಸಂಪೂರ್ಣ ಸಾಕ್ಷರತಾ ಆಂದೋಲನದ ಮೌಲ್ಯಮಾಪನದಿಂದಲೂ ನಾವು ಸಾಕಷ್ಟು ಕಲಿತಿದ್ದೇವೆ. ದವೆ ಸಮಿತಿಯ ಶಿಫಾರಸ್ಸುಗಳೂ, ಕಲಿಯುವವನ ಮೌಲ್ಯಮಾಪನ, ಕಲಿಕೆಯ ಸಾಧನಾ ಸಾಮರ್ಥ್ಯದ ಬಗ್ಗೆ ಸ್ಪಷ್ಟವಾಗಿ ಹೇಳಿರುವುದರಿಂದ ಒಬ್ಬ ಮನುಷ್ಯನನ್ನು ಸಾಕ್ಷರ ಎಂದು ನಿರ್ಧರಿಸಬೇಕಾದರೆ ಬೇಕಾದ ಕಲಿಕಾ ಕೌಶಲದ ಮಟ್ಟ ಸ್ಪಷ್ಟವಾದಂತಾಗಿದೆ (ಸಂ.ಸಾ.ಆಂದೋಲನದ ಮೌಲ್ಯಮಾಪನದ ಸಲುವಾಗಿ). ಅದರೊಟ್ಟಿಗೆ ಅದು ಸಂಪೂರ್ಣ ಸಾಕ್ಷರತಾ ಆಂದೋಲನದ ಪಠ್ಯಕ್ರಮವನ್ನು ವ್ಯಾಖ್ಯಾನ ಮಾಡಲೂ ಸಹಕರಿಸಿದೆ. ದವೆ ಸಮಿತಿ ಕಲಿಸುವ ವಿಧಾನದ ನಮೂನೆಯ ಬಗ್ಗೆ, ನೋಂದಾವಣೆ ಸಂಖ್ಯೆಯ ಪರಿಶೀಲನೆ ಅಥವಾ ಆಂದೋಲನದ ಸಾಕ್ಷರೇತರ ಕೌಶಲ ಮುಂತಾದ ಆಯಾಮಗಳ ಬಗ್ಗೆ ವಿವರವಾಗಿ ತಿಳಿಸದಿದ್ದರೂ ಮತ್ತೆ ನಮಗೆ ಈ ಮೌಲ್ಯಮಾಪನದ ವಿಧಾನದ ಬಗ್ಗೆ ಕೆಲವು ವಿಷಯ ತಿಳಿದಿದೆ.

ಮೇಲ್ವಿಚಾರಣೆಯ ಬಗ್ಗೆ ಅಧಿಕೃತ ಮಾರ್ಗೋಪಾಯ ದೊರೆಯದಿದ್ದರೂ ಭಾರತ ಜ್ಞಾನ ವಿಜ್ಞಾನ ಸಮಿತಿ ಪ್ರಕಟಿಸಿರುವ ಪುಸ್ತಕದ ಒಂದು ಅಧ್ಯಾಯವನ್ನು ಇವತ್ತು ಎಲ್ಲಾ ಕಡೆಯೂ ಅನುಸರಿಸಲಾಗುತ್ತವೆ. ಮೇಲ್ವಿಚಾರಣೆಯ ಮಾರ್ಗೋಪಾಯದ ಮುಖ್ಯಾಂಶಗಳು ಇಂದು ಸ್ಪಷ್ಟವಾಗಿವೆ. ಆದಾಗ್ಯೂ ಸಾಕ್ಷ್ಯರೋತ್ತರ ಕಾರ್ಯಕ್ರಮದ ಬಗ್ಗೆ ಅಂತಹ ಯಾವ ಕೆಲಸವೂ ನಡೆದಿಲ್ಲ. ಉತ್ತರ ಸಿದ್ಧಪಡಿಸಬಹುದಾದ ಸಮಸ್ಯೆಗಳನ್ನು ಗುರುತಿಸಿಲ್ಲವೆಂಬುದೂ ನಿಜ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಈ ಕೊರತೆಗೆ ಕಾರಣವೇನೆಂದರೆ ಸಾಕ್ಷರೋತ್ತರ ಕಾರ್ಯಕ್ರಮಕ್ಕೆ ಸಾಕ್ಷರತಾ ಆಂದೋಲನದಲ್ಲಿ ನಡೆಸುವಂತೆ ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ನಡೆಸುವ ಅಗತ್ಯವಿಲ್ಲ ಎಂಬ ಭಾವನೆ ಬೆಳೆದಿರುವುದು. ಕೆಲವರು ಅಭಿಪ್ರಾಯಪಡುವಂತೆ ನಿರಂತರ ಶಿಕ್ಷಣದಲ್ಲಿ ಅಂತಿಮ ಗಡಿರೇಖೆ (end point) ಇಲ್ಲದಿರುವುದು ಮತ್ತು ಅದು ವೈವಿಧ್ಯಮಯ ಕಾರ್ಯಕ್ರಮವಾಗಿರುವುದರಿಂದ ಮೇಲ್ವಿಚಾರಣೆ ಮತ್ತು ಮೌಲ್ಯಮಾಪನಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಬೇಕಾಗಿಲ್ಲ.

ಮೇಲ್ವಿಚಾರಣೆ ಮತ್ತು ಮೌಲ್ಯಮಾಪನದ ಬಗ್ಗೆ ಸಾಕ್ಷರೋತ್ತರದಲ್ಲಿ ಅಗತ್ಯ ಎಂಬ ಅಭಿಪ್ರಾಯ ತುಂಬಾ ಅಪಾಯಕಾರಿ. ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಅಗತ್ಯ ಎಂಬುದಕ್ಕೆ ಮೂರು ಕಾರಣಗಳನ್ನು ಪಟ್ಟಿಮಾಡಬಹುದು.

**ಒಂದನೆಯದು** ಲೆಕ್ಕ ಪರಿಶೋಧನೆಈ ಕಾರ್ಯಕ್ರಮಕ್ಕೆ ಸರ್ಕಾರದ ಅಪಾರ ಹಣ ಖರ್ಚಾಗುತ್ತದೆ. ಅದನ್ನು ಸಮರ್ಪಕವಾಗಿ ಖರ್ಚು ಮಾಡಲಾಗಿದೆಯೋ ಎಂಬುದನ್ನು ಮೌಲೀಕರಿಸಬೇಕಾಗುತ್ತದೆ.

**ಎರಡನೆಯದು** ಕಾರ್ಯಕ್ರಮ ಸುಧಾರಣೆಮೌಲ್ಯಮಾಪನ ನಮಗೆ ಮುಂದಿನ ಕಾರ್ಯಕ್ರಮವನ್ನು ಸುಧಾರಿಸುವುದಕ್ಕೆ ಬೇಕಾದ ನಿರ್ದೇಶನವನ್ನು ನೀಡುತ್ತದೆ. ಕಾರ್ಯಕ್ರಮವನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ಮತ್ತು ದುರ್ಬಲ ಕ್ಷೇತ್ರಗಳನ್ನು ಗುರುತಿಸಿ ಸುಧಾರಣೆ ತರುವುದಕ್ಕೆ ಮೌಲ್ಯಮಾಪನ ತುಂಬಾ ಅಗತ್ಯ.

**ಮೂರನೆಯದು** ಈ ಪರಿಸ್ಥಿತಿಯಲ್ಲಿ ಮೌಲ್ಯಮಾಪನದ ನಿಬಂಧನೆಗಳನ್ನು ವ್ಯಾಖ್ಯಾನಿಸುವುದು ಅತ್ಯವಶ್ಯಕ. ಇದರಿಂದ ಸಾಕ್ಷರೋತ್ತರದ ಗುರಿಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ಅವುಗಳಿಗೆ ಸೂಕ್ತವಾಗಿ ಮಾರ್ಗೋಪಾಯಗಳನ್ನು ಕಂಡು ಹಿಡಿಯಲು ತುಂಬಾ ಸಹಾಯವಾಗುತ್ತದೆ. ಇದು ಹಿಮ್ಮುಖ ಪ್ರಕ್ರಿಯೆ ಆರಂಭವಾದಂತಾಗುತ್ತದೆ. ಇದರಿಂದ ಉಪಯೋಗವೂ ಇದೆ. ಒಂದು ವೇಳೆ ಜಿಲ್ಲಾಧಿಕಾರಿ ಅಥವಾ ಕಾರ್ಯಕ್ರಮದ ಸಂಯೋಜಕರು ಎರಡು ವರ್ಷ ಮುಗಿದಾಕ್ಷಣ ಮೌಲ್ಯಮಾಪನ ತಂಡ ಮೌಲ್ಯಮಾನ ನಡೆಸಲು ಆಗಮಿಸುತ್ತದೆಂದು ಹೇಳಿದರೆಂದು ಭಾವಿಸಿ. ಅವರು ಯಾವಾಗ ಬರುತ್ತಾರೆ ಮತ್ತು ಬಂದಾಗ ಇಂಥ ವಿಷಯದ ಮೇಲೆ ಉದಾಹರಣೆ 1,2 ಮತ್ತು 3 ಪರೀಕ್ಷೆ ನಡೆಸಿ ಕೆಲವು ಪ್ರಶ್ನೆಗಳನ್ನು ಕೇಳುತ್ತಾರೆ ಎಂಬಂತಾದರೆ, ಜಿಲ್ಲಾ ತಂಡ ಮುಂದಿನ ಯೋಜನೆಗಳನ್ನು ರೂಪಿಸಲು ಸುಲಭವಾಗುತ್ತದಲ್ಲವೇ ? ಖಂಡಿತ ಸುಲಭವಾಗುತ್ತದೆ.

ಪ್ರಶ್ನೆ : ಸರಿ, ಹಾಗಾದರೆ ಅಂತಹ ಮೌಲ್ಯಮಾಪನ ಮಾರ್ಗಸೂಚಿಯನ್ನು ಏಕೆ ಯಾರೂ ತಯಾರಿಸಿಲ್ಲ ?

ಉತ್ತರ : ಏಕೆಂದರೆ ಯಾರೂ ಇದರ ಬಗ್ಗೆ ಯೋಚಿಸಿಯೇ ಇಲ್ಲ, ಜಿಲ್ಲೆಯಲ್ಲಿ 100% ಸಾಕ್ಷರೋತ್ತರ ಜಿಲ್ಲೆ ಎಂದು ಘೋಷಿಸಬೇಕು ಎಂದು ಹೇಳಿದ್ದರೆ ಮಾಡುತ್ತಿದ್ದರೋ ಏನೋ ?

ಆದರೆ ಮತ್ತೊಂದು ಮುಖ್ಯ ಕಾರಣವೇನೆಂದರೆ ನಿರೂಪಿಸಲಾಗಿರುವ ಸಾಕ್ಷರೋತ್ತರ ಕಾರ್ಯಕ್ರಮದ ಧ್ಯೇಯಗಳು ವ್ಯತ್ಯಾಸವಾಗುತ್ತಿರುತ್ತವೆ ಮತ್ತು ಮತ್ತೂ ವೈವಿಧ್ಯಮಯವಾಗಿರುತ್ತವೆ. ಈ ಧ್ಯೇಯಗಳಾವುವು ಎಂಬುದು ಯಾರಿಗೂ ಸರಿಯಾಗಿ ತಿಳಿದಿಲ್ಲ.

ಪ್ರಶ್ನೆ : ಹಾಗಾದರೆ ಏಕೆ ಪ್ರತಿಯೊಂದು ಜಿಲ್ಲೆಯೂ ತಮ್ಮ ಧ್ಯೇಯಗಳನ್ನು ಸ್ಪಷ್ಟವಾಗಿ ಹೇಳಬಾರದು ? (ತಾವು ಅಂಗೀಕರಿಸಿದ ಚೌಕಟ್ಟಿನಲ್ಲಿ) ಮತ್ತು ಮೌಲ್ಯಮಾಪನ ತಂಡ ಇದರ ಆಧಾರದ ಮೇಲೆ ಈ ಧ್ಯೇಯಗಳು ಎಷ್ಟರಮಟ್ಟಿಗೆ ಸಾಧನೆಯಾಗಿವೆ ಎಂದು ನಿರ್ಧರಿಸಬಹುದು.

ಉತ್ತರ : ಖಂಡಿತ ಇದು ಸಮಂಜಸವಾಗಲಾರದು, ಇಲ್ಲಿ ಸಮಸ್ಯೆ ಏನೆಂದರೆ ಯಾವ ಜಿಲ್ಲಾ ತಂಡವೂ ತಮ್ಮ ಧ್ಯೇಯಗಳನ್ನು ಸ್ಪಷ್ಟಪಡಿಸಿಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮುಸುಕಾದ ವಲಯುಗಳು

ಉದಾಹರಣೆ ನಾವು ಜನರಿಗೆ ಅರಿವನ್ನುಂಟುಮಾಡುತ್ತೇವೆಂದು ಹೇಳುತ್ತಾರೆ. ಆದೆರ ಯಾವುದರ ಬಗ್ಗೆ ಎಂಬುದು ಮಾತ್ರ ಸರಿಯಾಗಿ ತಿಳಿದಿಲ್ಲ. ಅಲ್ಲದೆ ಅರಿವು ಉಂಟಾಗಿದೆ ಎಂಬುದನ್ನು ಮೌಲ್ಯಮಾಪನ ಮಾಡುವುದು ಕಷ್ಟಸಾಧ್ಯ. ಇದಕ್ಕೆ ಬದಲಾಗಿ ಒಂದು ವೇಳೆ, (ಪ್ರತಿಯೊಂದು ಕುಟುಂಬವೂ ಅತಿಸಾರದ ಚಿಕಿತ್ಸೆಯ ಬಗ್ಗೆ ತಿಳಿಯುವಂತೆ ಮಾಡುತ್ತೇವೆ ಅಥವಾ ಕನಿಷ್ಠವೇತನ ಕಾನೂನಿನ ಬಗ್ಗೆ ತಿಳಿಸುತ್ತೇವೆಂದು ಹೇಳಿದರೆ ಅದನ್ನು ಸುಲಭವಾಗಿ ಮೌಲ್ಯಮಾಪನ ಮಾಡಬಹುದು)



ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ಸಾಧನೆ ಮಾಡಿತೋರಿಸಬೇಕಾದ ಮುಖ್ಯವಾದ ಕ್ಷೇತ್ರಗಳಿವು

ಎ) ಓದುವ ಬರೆಯುವ ಮತ್ತು ಲೆಕ್ಕಚಾರದ ಕೌಶಲಗಳನ್ನು ಉಳಿಸಿಕೊಳ್ಳುವುದು ಮತ್ತು ಬೆಳೆಸಿಕೊಳ್ಳುವುದು.

ಬಿ) ಸ್ವಾವಲಂಬಿ ಓದುಗರನ್ನಾಗಿ ಮಾಡುವುದು ಮತ್ತು ಕಲಿಕಾ ಕೌಶಲಗಳನ್ನು ನಿತ್ಯಜೀವನದಲ್ಲಿ ಬಳಸಿಕೊಳ್ಳುವಂತೆ ಮಾಡುವುದು.

ಸಿ) ಅರಿವನ್ನುಂಟು ಮಾಡುವುದು ಮತ್ತು

ಡಿ) ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಪ್ರೋತ್ಸಾಹಿಸುವುದು ಇತ್ಯಾದಿ.....

ಪ್ರತಿಯೊಂದು ಕ್ಷೇತ್ರದಲ್ಲಿಯೂ ವಿವರಗಳನ್ನು ಕೂಲಂಕುಷವಾಗಿ ಸಿದ್ಧಪಡಿಸಿ ಮೌಲ್ಯಮಾಪನ ಮಾಡುವುದಕ್ಕೆ ಸಾಧ್ಯಮಾಡಿಕೊಳ್ಳುವುದು ಜಿಲ್ಲಾ ತಂಡದ ಜವಾಬ್ದಾರಿ.

ಮೌಲ್ಯಮಾಪನದ ನಿಬಂಧನೆಗಳನ್ನು ನಿರೂಪಿಸುವುದರಿಂದ ಮುಂದಿನ ಕಾರ್ಯಕ್ರಮಗಳನ್ನು ಯೋಜಿಸಲು ಸಹಾಯಕವಾಗುತ್ತದೆ.

ಉದಾಹರಣೆ ಪ್ರತಿಯೊಬ್ಬರು 'ಕನಿಷ್ಠ ವೇತನ'ದ ಬಗ್ಗೆ ತಿಳಿದಿರಬೇಕ, ಎಂಬುದು ಮೌಲ್ಯಮಾಪನದ ಒಂದು ನಿಬಂಧನೆಯಾದರೆ ಅದರ ಅರ್ಥ

ಎ) ಕನಿಷ್ಠ ವೇತನದ ಬಗ್ಗೆ ಸಮರ್ಪಕವಾದ ಸಾಮಗ್ರಿಯನ್ನು ತಯಾರಿಸುವುದು.

ಬಿ) ತರಬೇತಿಯಲಿ 'ಕನಿಷ್ಠ ವೇತನ 'ಎಂಬ ವಿಷಯವನ್ನು ಸೇರಿಸುವುದು

ಸಿ) ಕನಿಷ್ಠ ವೇತನ ಎಂಬ ಸಂದೇಶ ತಲುಪಿಸುವಂತಹ ಚಟುವಟಿಕೆಗಳನ್ನು ರೂಪಿಸುವುದು.

ಡಿ) ಈ ಸಂದೇಶ ಉದ್ದೇಶಿತ ಜನರನ್ನು ತಲುಪಿದೆಯೋ ಇಲ್ಲವೋ ಎಂದು ಮೇಲ್ವಿಚಾರಣೆ ಮಾಡಿ ತಿಳಿದುಕೊಳ್ಳುವುದು.

ಇ) ಸಂದೇಶವು ಉದ್ದೇಶಿತ ಜನರನ್ನು ತಲುಪಿರದಿದ್ದರೆ ಅದಕ್ಕೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು ಅಥವಾ ಪುನರ್ ಆಂದೋಲನ ರೂಪಿಸುವುದು.

ಎಫ್) ಜನರಲ್ಲಿ 'ಕನಿಷ್ಠ ವೇತನ'ದ ಬಗ್ಗೆ ಹೆಚ್ಚಿನ ಅರಿವು ಮೂಡಿರುವುದು ಮೌಲ್ಯಮಾಪನದ ಮೂಲಕ ಗೋಚರಿಸಬೇಕು.

**ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು**

ಪ್ರಶ್ನೆ : ಆದರೆ ಸಾಮಾಜಿಕ ಧೋರಣೆಗಳಲ್ಲಾದ ಬದಲಾವಣೆಗಳನ್ನು ಮೌಲ್ಯಮಾಪನ ಮಾಡುವುದು ಹೇಗೆ? ಆದ್ದರಿಂದ ಮೌಲ್ಯಮಾಪನ ಹೆಚ್ಚಾಗಿ ಸಾಕ್ಷರತಾ ಕೌಶಲಗಳಿಗೆ ಮತ್ತು ಬೇರೆ ಬೇರೆ ಶೈಕ್ಷಣಿಕ ಚಟುವಟಿಕೆಗಳಲ್ಲಿ ಪಡೆದ ಜ್ಞಾನಕ್ಕೆ ಮಾತ್ರ ಸೀಮಿತವಾಗಿದ್ದರೆ ಸಾಕೆಂದು ಕಾಣುತ್ತದೆ.

ಉತ್ತರ : ಮೊದಲನೆಯದಾಗಿ ಮೌಲ್ಯಮಾಪನವು ಹೆಚ್ಚು ಜನ ನವಸಾಕ್ಷರರ ಕಲಿಕಾ ಕೌಶಲಗಳು ಮತ್ತು ಲೆಕ್ಕಾಚಾರದ ಕೌಶಲಗಳು ಹಾಗೂ ಅವರ ಗಳಿಸಿದ ಜ್ಞಾನದ ಮೇಲೆ ಬೆಳಕು ಚೆಲ್ಲುತ್ತದೆ.

ಉದಾಹರಣೆ ಎಷ್ಟು ಜನ ನವಸಾಕ್ಷರರು ಸಾಲದ ಮೇಲಿನ ಬಡ್ಡಿ ಲೆಕ್ಕಾಚಾರ ಮಾಡಬಲ್ಲರು? ಎರಡನೆಯದಾಗಿ ಸಾಮಾಜಿಕ ನಡವಳಿಕೆ ಮತ್ತು ಬದಲಾವಣೆಗಳನ್ನು ಸಹ ಕೆಲವು ವಿಶಿಷ್ಟ ತಂತ್ರಗಳನ್ನು ಬಳಸಿ ಮೌಲ್ಯಮಾಪನ ಮಾಡಬಹುದು. ಇದಕ್ಕಾಗಿ ಸೂಕ್ತವಾದ ಧ್ಯೇಯಗಳನ್ನು ವ್ಯಾಖ್ಯಾನಿಸುವುದು ಮುಖ್ಯ.

ಉದಾಹರಣೆ ಸಾಕ್ಷರೋತ್ತರ ಕಾರ್ಯಕ್ರಮ ಯಶಸ್ವಿಯಾಗಿ ನಡೆಯುತ್ತಿರುವ ಒಂದು ಹಳ್ಳಿಯಲ್ಲಿ ರೋಗನಿರೋಧಕ ಚುಚ್ಚುಮದ್ದನ್ನು ಪಡೆಯದೇ ಇರುವ ಒಂದು ಮಗುವೂ ಇರಕೂಡದು ಮತ್ತು ಶಾಲೆಗೆ ಹೋಗದ ಒಂದು ಹೆಣ್ಣು ಮಗುವೂ ಇರಕೂಡದು ಎಂದು ನಾವು ಹೇಳಬಹುದು. ಇದನ್ನು ಮೌಲ್ಯಮಾಪನ ಮಾಡುವುದು ಸುಲಭ.

ಪ್ರಶ್ನೆ ಅಂತಹ ಮೌಲ್ಯಮಾಪನ ಮಾದರಿಯನ್ನು ರೂಪಿಸಿರುವ ಯಾವುದಾದರೂ ಜಿಲ್ಲೆ ಇದೆಯೇ?

ಉತ್ತರ ಇಲ್ಲ ಆದನ್ನೇ ಈವರೆಗೆ ಹೇಳಿರುವುದು ಭಾವನಗರ ಜಿಲ್ಲೆ ಮತ್ತು ಬೇರೆ ಒಂದೆರಡು ಜಿಲ್ಲೆಗಳು ಸಾಕ್ಷರತಾ ಕೌಶಲಗಳು, ಮೌಲ್ಯಮಾಪನ ಮಾಡಲು ಮಾದರಿಯನ್ನು ತಯಾರಿಸಲು ಪ್ರಯತ್ನಿಸಿವೆ.

ಆದರೆ ಸಾಕ್ಷರೋತ್ತರ ಕಾರ್ಯಕ್ರಮದ ಎಲ್ಲಾ ಚಟುವಟಿಕೆಗಳ ಮೌಲ್ಯಮಾಪನಕ್ಕೆ ಬೇಕಾದ ಸಾಮಗ್ರಿಯನ್ನು ಇದುವರೆಗೆ ಯಾರು ಸಿದ್ಧಪಡಿಸಿಲ್ಲ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ನಾವೀಗ ಕೆಲವು ನಿಬಂಧನೆಗಳನ್ನು ನಿರೂಪಿಸೋಣ

ಎರಡು ವರ್ಷದ ಸಾಕ್ಷರೋತ್ತರ ಕಾರ್ಯಕ್ರಮದ ನಂತರ ಗ್ರಾಮದ ಪ್ರತಿಯೊಬ್ಬ ನವಸಾಕ್ಷರನೂ ಕೆಲವು ಕೌಶಲಿಗಳನ್ನು ಬೆಳಸಿಕೊಂಡಿರಬೇಕು. ಅವುಗಳು ಇಂತಿವೆ.

**ಓದುವುದು** :10ರಿಂದ 20 ಪುಟದ ಪುಸ್ತಕವನ್ನು ಅರ್ಥಮಾಡಿಕೊಂಡು ಓದುವ ಸಾಮರ್ಥ್ಯ

ಸರಿಯಾದ ಉಚ್ಚಾರಣೆ ಮಾಡುವ ಮತ್ತು ಅಲ್ಲಲ್ಲಿ ನಿಲ್ಲಿಸಿ ಓದುವ ಸಾಮರ್ಥ್ಯ

**ಬರೆಯುವುದು** : 2 ಪುಟದಷ್ಟು ಪ್ರಬಂಧ ಅಥವಾ ಅರ್ಜಿಯನ್ನು ಬರೆಯುವ ಸಾಮರ್ಥ್ಯ

ಒಂದು ಪುಟದಷ್ಟು ಸೂಕ್ತ ಚಿನ್ಹೆಗಳನ್ನು ಬಳಸಿ 5 ಕ್ಕಿಂತ ಕಡಿಮೆ ತಪ್ಪುಗಳಿರುವಂತೆ ಬರೆಯುವ ಸಾಮರ್ಥ್ಯ

**ಲೆಕ್ಕಾಚಾರ** : ತೆಗೆದುಕೊಂಡ ಸಾಲಕ್ಕೆ ಬಡ್ಡಿ ಲೆಕ್ಕಾಚಾರ ಮಾಡುವುದು. 10 ರವರೆಗೆ ಮಗ್ಗಿ (ಕೋಷ್ಟಕ) ಯನ್ನು ತಿಳಿದು ಬಳಸುವ ಸಾಮರ್ಥ್ಯ

**ಸ್ವತಃ ಓದುವುದು** : ಕನಿಷ್ಠ ಪಕ್ಷ ತಿಂಗಳಿಗೊಂದು ಪುಸ್ತಕವನ್ನು ಗ್ರಂಥಾಲಯದಿಂದ ತಂದು ಓದುವುದು.

ಕಾಲಕಾಲಕ್ಕೆ ವರ್ತಮಾನ ಪತ್ರಿಕೆಯನ್ನು ಓದುವುದು.

**ಅನ್ವಯ** : ಅಂಚೆಕಛೇರಿ, ಬ್ಯಾಂಕು ಮತ್ತು ಇತರ ಅರ್ಜಿಗಳನ್ನು ತುಂಬುವುದನ್ನು ಕಲಿತುಕೊಳ್ಳುವುದು.

ಅಂಗಡಿಯ ಸಾಮಾನಿನ ಬೆಲೆಗಳ ಪಟ್ಟಿಯನ್ನು ಓದುವುದು

ಕ್ರಿಮಿನಾಶಕ ಬಳಕೆಯ ಸೂಚನೆಯನ್ನು ಓದುವುದು.

**ಅರಿವು** : MARG ಪ್ರಕಟಿಸುವ ''ಮಹಿಳಾ ನ್ಯಾಯಾಂಗ ಹಕ್ಕುಗಳ ಬಗೆಗಿನ ಸಾಕ್ಷರತೆ'' ಯ ಮೇಲಿನ 10 ಪುಸ್ತಕಗಳನ್ನು ಓದಿರುವುದು, ಆರೋಗ್ಯದ 10 ಸೂತ್ರಗಳನ್ನು ತಿಳಿದಿರುವುದು (UNICEF ಗುರುತಿಸಿರುವಂತೆ)

**ಟಿಪ್ಪಣಿ** : ಪ್ರತಿಯೊಂದು ವಿಭಾಗದಲ್ಲೂ ನಾವು ಒಂದು ಅಥವಾ ಎರಡು ಉದಾಹರಣೆಗಳನ್ನು ಸೂಚಿಸಿದ್ದೇವೆ. ಸಾಮಾನ್ಯವಾಗಿ ಪ್ರತಿಯೊಂದರಲ್ಲೂ 10ರಿಂದ 15 ಅಂಶಗಳು ಇರಬಹುದು.

ಸಾಮಾಜಿಕ ಧೋರಣೆ ಮತ್ತು ಗುಂಪು ಚಟುವಟಿಕೆಗಳ ಸಾಧನೆಯನ್ನು ಮೌಲ್ಯಮಾಪನ ಮಾಡಲು ಈ ಕೆಳಗಿನ ನಿಬಂಧನೆಗಳನ್ನು ಬಳಸಬಹುದು.

ಮಹಿಳಾ ಸಮಾನತೆ :ಕ್ಷೇತ್ರದಲ್ಲಿ

ಉದಾಹರಣೆ i) 14 ವರ್ಷ ವಯಸ್ಸಿನ ಕೆಳಗಿರುವ ಎಲ್ಲಾ ಹೆಣ್ಣು ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ.

ii) ಮದುವೆ 18 ವರ್ಷದ ನಂತರ

iii) ಕಾರ್ಯನಿರತ ಮಹಿಳಾ ಕಾರ್ಯಕರ್ತರ ಸಮಿತಿ ರಚಿಸುವುದು

iv) ಮಹಿಳೆಯರು ವರ್ತಮಾನ ಪತ್ರಿಕೆ ಓದುವುದು

**ಶಿಕ್ಷಣ ಕ್ಷೇತ್ರದಲ್ಲಿಉದಾಹರಣೆ**

i) ಎಲ್ಲಾ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ ಮತ್ತು ಕನಿಷ್ಠ ಕಲಿಕಾ ಮಟ್ಟರನ್ನು ತಲುಪಿದ್ದಾರೆ.

ii) ಗ್ರಾಮದಲ್ಲಿ ಚೆನ್ನಾಗಿ ನಡೆಯುತ್ತಿರುವ ಗ್ರಂಥಾಲಯವಿದೆ

**ಆರೋಗ್ಯಕ್ಷೇತ್ರದಲ್ಲಿ ಉದಾಹರಣೆ**

i) ಕುಡಿಯುವ ನೀರು ಶುದ್ಧವಾಗಿದೆ

ii) ನೈರ್ಮಲ್ಯ ಸೂತ್ರಗಳನ್ನು ಪಾಲಿಸಲಾಗಿದೆ

iii) ಮಕ್ಕಳೆಲ್ಲಾ ರೋಗನಿರೋಧಕತ್ವ ಪಡೆದಿದ್ದಾರೆ.

**ಅಭಿವೃದ್ಧಿ ಕ್ಷೇತ್ರದಲ್ಲಿ ಉದಾಹರಣೆ**

i) ಪಂಚಾಯಿತಿ ಮಟ್ಟದ ಸಂಪನ್ಮೂಲ ಭೂಪಟವನ್ನು ತಯಾರಿಸಲಾಗಿದೆ ಮತ್ತು ಅದರ ವಿವರ ಎಲ್ಲರಿಗೂ ತಿಳಿದಿದೆ.

ii) ಕ್ರಿಮಿನಾಶಕ ಅನಗತ್ಯ ಬಳಕೆ ನಿಂತಿದೆ

ಮುಂದೆ ಧ್ಯೇಯೋದ್ದೇಶಗಳನ್ನು ಎರಡು ಪ್ರಮುಖ ವಿಭಾಗಗಳನ್ನಾಗಿ ಮಾಡಲು ಸಲಹೆ ಮಾಡಲಾಗಿದೆ.

1. **ಅತ್ಯಾವಶ್ಯಕ ನಿಬಂಧನೆ** : ಇದರಲ್ಲಿ ಸಾಧಿಸಲೇಬೇಕಾದ ನಿಬಂಧನೆಗಳು ಸೇರಿರುತ್ತವೆ.

2. **ಐಚ್ಛಿಕ ನಿರ್ಬಂಧನೆ** : ಇದರಲ್ಲಿ ಸಾಧನೆಯಾದಾಗ ಮಾತ್ರ ಹೆಚ್ಚು ಕಾರ್ಯಕ್ರಮಗಳನ್ನು ಸೇರಿಸಲಾಗುತ್ತದೆ. ವಾಸ್ತವವಾಗಿ ಅನೇಕ ಕ್ಷೇತ್ರಗಳಲ್ಲಿ ಅವು ಸಾಧನೆಯಾಗದಿರಬಹುದು.

ಉದಾಹರಣೆ ಪಂಚಾಯಿತಿ ಮಟ್ಟದ ಸಂಪನ್ಮೂಲ ಭೂಪಟ ತಯಾರಿಸುವುದು, ಅತ್ಯಾವಶ್ಯಕ ನಿಬಂಧನೆ ಎಂದು ಒಬ್ಬರು ಹೇಳಿದರೆ, ಪರ್ಯಾಯ ಬೆಳೆ ವಿಧಾನ, ಐಚ್ಛಿಕ ನಿಬಂಧನೆ ಎಂದು ಮತ್ತೊಬ್ಬರು ಹೇಳಬಹುದು.

ಇನ್ನು ಮುಂದುವರಿದಂತೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಷಯಗಳಿಗೂ ಇಂತಹ ಧ್ಯೇಯಗಳನ್ನು ನಿರ್ಧರಿಸಬಹುದು.

ಪ್ರಶ್ನೆ : ಹಾಗಾದರೆ ಚರ್ಚೆ ಅಥವಾ ವಿವಾದ ಏಕೆ ? ಇದಕ್ಕೆ ಯಾರ ವಿರೋಧವೂ ಇರಲಾರದು

ಉತ್ತರ : ಸರಿ ಒಂದು ಸಂಶಯವಿದೆ, ಏನೆಂದರೆ ಮೌಲ್ಯಮಾಪನದ ನಿಬಂಧನೆಯನ್ನು ಅರ್ಥಪೂರ್ಣವಾಗಿ ನಿರೂಪಿಸಲಾಗುವುದೇ ? ಅಥವಾ ಇದರ ಆಧಾರದ ಮೇಲೆ ಕಾರ್ಯಕ್ರಮವನ್ನು ರೂಪಿಸಬಹುದು.

ಪ್ರಶ್ನೆ : ಇದೆಲ್ಲವೂ ಸಾಕ್ಷರೋತ್ತರ ಕಾರ್ಯಕ್ರಮದ ಬಗ್ಗೆಯೇ ಆಯಿತು. ಮೇಲ್ವಿಚಾರಣೆಯ ಬಗ್ಗೆ ವಿವಾದವೇನು ?

ಉತ್ತರ : ಇದರ ಬಗ್ಗೆ ಯಾವುದೇ ವಿವಾದವಿಲ್ಲ, ಏಕೆಂದರೆ ಸಮಸ್ಯೆಯನ್ನೇ ಗುರುತಿಸಿಲ್ಲ. ಒಂದು ಜಿಲ್ಲೆ ನಿರಂತರವಾಗಿ ಸಾಕ್ಷರೋತ್ತರ ಕಾರ್ಯಕ್ರಮದ ವರದಿ ಸಂಗ್ರಹಿಸುವಾಗ ಅದು ಏನನ್ನು ನಿರೀಕ್ಷಿಸುತ್ತದೆ.

## ಸಾಕ್ಷರೋತ್ತರ ಕಾರ್ಯಕ್ರಮದ ಮಸುಕಾದ ವಲಯಗಳು

ಪ್ರತಿಯೊಬ್ಬ ನವಸಾಕ್ಷರನು ಕೇಂದ್ರಕ್ಕೆ ಹಾಜರಾಗುವುದು ಸಾಧ್ಯವಿಲ್ಲ. ಮತ್ತು ಹಾಜರಾಗದಂತೆ ನಿರೀಕ್ಷಿಸುವುದು ಸರಿಯಲ್ಲ, ಆದರೆ ಪ್ರತಿಯೊಬ್ಬರೂ ಸ್ವಲ್ಪವಾದರೂ ಸ್ವತಃ ಓದುವುದು ಅಗತ್ಯ. **ಉದಾಹರಣೆ** : ವರ್ತಮಾನ ಪತ್ರಿಕೆ ಮತ್ತು ಪುಸ್ತಕವನ್ನು ಓದುವುದು

ನವಸಾಕ್ಷರರ ಯಾವ ಚಟುವಟಿಕೆಗಳನ್ನು ಮೇಲ್ವಿಚಾರಣೆ ಮಾಡಬೇಕಾಗುತ್ತದೆ ? ಅದರ ಮಾಹಿತಿಯನ್ನು ಸಂಗ್ರಹಿಸುವುದು ಹೇಗೆ ? (ಉದಾ. ನವಸಾಕ್ಷರರ ಪತ್ರಿಕೆಯನ್ನು ಬಳಸುವುದು, ಪಾಲ್ಗೊಳ್ಳುವುದು, ಸಾಕ್ಷರ ವೃತ್ತದ ಕಲಿಕಾವಧಿಯ ಪಠ್ಯವಿಷಯ)

ಜಿಲ್ಲೆ ತಾಲ್ಲೂಕು ಮತ್ತು ಗ್ರಾಮದ ವರದಿಗಳಲ್ಲಿ ಯಾವ ಅಂಶಗಳನ್ನು ಸೇರಿಸಬೇಕು. ಕೆಲವು ಜಿಲ್ಲೆಗಳ ವರದಿಗಳು ಹೀಗಿವೆ 1200 ಜನ ಚೈತನ್ಯ ಕೇಂದ್ರಗಳು ತೆರೆದವು, 400 ಜನ ಚೈತನ್ಯ ಕೇಂದ್ರಗಳು ತೆರೆದವು, ವರದಿ ಎಂದರೆ ಇಷ್ಟೇ ಅಲ್ಲ, ಸಾಕ್ಷರೋತ್ತರ ಪರಿಕಲ್ಪನೆಯಲ್ಲಿರುವಂತೆ ಈ ಜನ ಚೈತನ್ಯ ಕೆಂದ್ರ ಅಥವಾ ಜನಶಿಕ್ಷಣ ನಿಲಯಗಳು ಸರಿಯಾಗಿ ಕಾರ್ಯನಿರ್ವಹಿಸಬೇಕು, ಆದರೆ ಆ ರೀತಿಯ ಕಾರ್ಯ ನಿರ್ವಹಣಾ ವಿಧಾನವನ್ನು ಮೇಲ್ವಿಚಾರಣೆ ಮಾಡುವುದು ಹೇಗೆ ?

ಈ ರೀತಿ ಮೇಲ್ವಿಚಾರಣೆಗೆ ಅನುಬಂಧ ಮತ್ತು ಕೈಪಿಡಿಯನ್ನು ಸಿದ್ಧಪಡಿಸುವ ತುರ್ತು ಅಗತ್ಯವಿದೆ.

ಪ್ರಶ್ನೆ : 1ಎರಡು ವರ್ಷದನಂತರ ಎರಡನೆಯ (ದ್ವಿತೀಯ) ಹಂತದ ಸಾಕ್ಷರತಾ ಆಂದೋಲನದ ಕಾರ್ಯಕ್ರಮವನ್ನು ಮುಗಿಸಿದ ಮೇಲೆ ಒಂದು ಸಮಾರಂಭವನ್ನು ಏರ್ಪಡಿಸಿ ಒಂದು ಜಿಲ್ಲೆಯನ್ನು 100% ಸಾಕ್ಷರೋತ್ತರತೆಯನ್ನು ಸಾಧಿಸಲಾಗಿದೆ ಎಂದು ಘೋಷಿಸಿದರೆ ಸಮಸ್ಯೆ ಬಗೆಹರಿದೀತೆ ?

---

# ಭಾರತ ಜ್ಞಾನ ವಿಜ್ಞಾನ ಸಮಿತಿಯ-ನಕ್ಷೆ

1. ಮೊದಲಿನಿಂದಲೂ ಜನರ ಬೆಂಬಲವನ್ನು ಸಂಪೂರ್ಣ ಸಾಕ್ಷರತಾ ಆಂದೋಲನಕ್ಕೆ ಒದಗಿಸಿಕೊಡುವುದು.

2. ಯೋಜನೆಯ ಎಲ್ಲಾ ಹಂತಗಳಲ್ಲೂ ಸಹಕರಿಸು-ವುದು-ಜನರನ್ನು ಪರಿಸರವನ್ನು ಯೋಜನೆಯ ಸಹಾ-ಯಕ್ಕೆ ತಿರುಗಿಸುವುದು-ತರಬೇತಿ ನೀಡುವುದು, ಜನರ ಬೆಂಬಲವನ್ನು ಬಲಗೊಳಿಸಿ ಕಾಯ್ದಿರಿಸುವುದು.

3. ಸತತವಾಗಿ ಅಧಿಕಾರಿಗಳ, ರಾಜಕಾರಣಿಗಳ, ಸ್ವಯಂ ಸೇವಾ ಸಂಘಗಳ, ಕಾರ್ಮಿಕ ಸಂಘಗಳ, ಬುದ್ಧಿಜೀವಿಗಳ ಸಂಪರ್ಕವಿಟ್ಟುಕೊಂಡು ಸಾಕ್ಷರತಾ ಆಂದೋಲನಕ್ಕೆ ಪ್ರೋತ್ಸಾಹ ಮತ್ತು ಸಹಾಯವನ್ನು ನೀಡುವುದು.

4. ಜಿಲ್ಲೆಗಳಲ್ಲಿ ಮತ್ತು ರಾಜ್ಯಗಳಲ್ಲಿ ಭಾರತ ಜ್ಞಾನ ವಿಜ್ಞಾನ ಸಮಿತಿಯ ಕೇಂದ್ರಗಳನ್ನು ತೆರೆದು ಸಾಕ್ಷರತಾ ಆಂದೋಲನವನ್ನು ಸ್ಥಿರಗೊಳಿಸುವುದು. ಇದರಿಂದ ಸಾಕ್ಷರತಾ ಕಾರ್ಯಕ್ರಮದ ನಂತರವೂ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ, ಮಹಿಳೆಯರ ಅಭಿ-ವೃದ್ಧಿ, ಆರೋಗ್ಯ, ಸಾಂಸ್ಕೃತಿಕ ಜಾಗೃತಿ ಮುಂದುವ-ರಿಸಲು ಸಹಾಯ ಮಾಡಲಾಗುವುದು. ಸಂಘಟನೆ-ಗಳನ್ನು ರಚಿಸುವುದು ಮತ್ತು ಜನರೊಂದಿಗೆ ವಿಶ್ವಾ-ಸದಿಂದ ಸಂಪರ್ಕ ಹೊಂದಿರುವುದು ಪ್ರಜಾಪ್ರಭುತ್ವ-ದಲ್ಲಿ ಜನರನ್ನು ಅಭಿವೃದ್ಧಿಯ ಕಡೆಗೆ ಸೆಳೆದೊಯ್ಯಲು ಸಹಾಯಕವಾಗುವುದು.